# ಕನ್ನಡ-ಕರ್ನಾಟಕತ್ವವನ್ನು ಕುರಿತ ಆಲೂರರ ಚಿಂತನೆಗಳ ವಿಶ್ಲೇಷಣೆ

ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ನಿಬಂಧ

ಸಿ. ಆರ್. ಗೋವಿಂದ ರಾಜು

ಕನ್ನಡ ವಿಶ್ವವಿದ್ಯಾಲಯ

ಹಂಪಿ

೧೯೯೩-೯೪

77

# ಕನ್ನಡ — ಕರ್ನಾಟಕತ್ವವನ್ನು ಕುರಿತ ಆಲೂರರ ಚಿಂತನೆಗಳ ವಿಶ್ಲೇಷಣೆ

ಎಂ.ಫಿಲ್., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ನಿಬಂಧ



ಸಿ. ಆರ್. ಗೋವಿಂದರಾಜು
ಸಂಶೋಧನ ವಿದ್ಯಾರ್ಥಿ
ಚರಿತ್ರೆ ವಿಭಾಗ

:

ಕನ್ನಡ ವಿಶ್ವವಿದ್ಯಾಲಯ, ಹಂಪಿ

1994





## ಇವರು ಆಲೂರವರು

ತನ್ಮಯತೆಯಲ್ಲಿ ತಾಟಸ್ಥ್ಯವಿರುವೀ ಗುಟ್ಟು
ಇದು ಯಾ ಪುರಾತನದ ಮುನಿಯು ನೂತನ ಠೀವಿ
ಮೂಗನೇರಕೆ ನಿಲುವೆ ನಿಲಿಸಿರುವ ನೀ ಜೀವಿ
ಇತಿಹಾಸ — ಮಧುರಾಣ ಕಟ್ಟಿರುವ ಈ ಹುಟ್ಟು?

ಜಡೆಬೀಳವರು ಇವರಾರೊ ಎಂಬರೆ ಮಂಕೆ
ಕಲ್ಲಿದೆಯು ಸೀಳಿ ಎರಡಕ್ಷರವ ಕಂಡವರು
ಪ್ರಾಯುದೆದೆಯಲಿ ಬತ್ತಿ ಅದರ ಬೆಳೆ ಗೂಡವರು
ಇವರು ಆಲೂರವರು; ಏಕೆ ಬೇಕೀ ಶಂಕೆ?

ಜೀವ ವೈಚಿತ್ರ್ಯಕೂ ಚಿತ್ರಕನ ಚಿತ್ರಕೂ
ಬಿಂಬ, ಬೈಂಬಿಕ ಬಂದಿ ಛಂದವೇನೋ ಇಹುದು
ಹೊಂಯು ಗೆರೆ, ಕೂದಲೆಳೆ, ಕಲೆಕಳೆ, ಪಾತ್ರಕೂ
ಕರೆಯು ಸೂತ್ರಾನುವರ್ತಿತ್ವವಂದವಂತಹುದು.

ಇಗೊ ಬೇರು ಬಿಟ್ಟಹುದು ಇಲ್ಲಿ ಗತ ವೈಭವವು
ಕಣ್ಣಲ್ಲಿ ಮಾತ್ರ ನಾಟಿಹುದುದ್ಭುತೋದ್ಭವವು.

— ಅಂಬಿಕಾತನಯ ದತ್ತ

: : :

## ಮಾರ್ಗದರ್ಶಕರ ಪತ್ರ

'ಕನ್ನಡ — ಕರ್ನಾಟಕತ್ವವನ್ನು ಕುರಿತ ಆಲೂರರ ಚಿಂತನೆಗಳ ವಿಶ್ಲೇಷಣೆ' ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್., ಪದವಿಗಾಗಿ ಶ್ರೀ ಸಿ.ಆರ್.ಗೋವಿಂದರಾಜು ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ನಿಬಂಧವನ್ನು ಹಾಗೂ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಲ್ಲವೆಂಬುದನ್ನು ಈ ಮೂಲಕ ದೃಢೀಕರಿಸುತ್ತೇನೆ.

ಕಿರಂನಾಗರಾಜ

(ಕಿ.ರಂ.ನಾಗರಾಜ)

೨೪.೯.೯೪

## ನನ್ನ ಮಾತು

ಎಂ.ಫಿಲ್., ಪದವಿ ಪರೀಕ್ಷೆಯ ಒಂದು ಭಾಗವಾಗಿ 'ಕನ್ನಡ — ಕರ್ನಾಟಕತ್ವವನ್ನು ಕುರಿತ ಆಲೂರರ ಚಿಂತನೆಗಳ ವಿಶ್ಲೇಷಣೆ' ಎಂಬ ಶೀರ್ಷಿಕೆಯ ಈ ನಿಬಂಧವನ್ನು ಸಿದ್ಧಪಡಿಸಲಾಗಿದೆ. ಇದನ್ನು ಸಿದ್ಧಪಡಿಸುವಲ್ಲಿ ಸೂಕ್ತ ಮಾರ್ಗದರ್ಶನವನ್ನು ನೀಡಿದ ನೆಚ್ಚಿನ ಗುರುಗಳಾದ ಕಿ.ರಂ. ನಾಗರಾಜ ಅವರಿಗೆ ನನ್ನ ಮೊದಲ ನಮನಗಳು ಸಲ್ಲುತ್ತವೆ.

ತಾತ್ವಿಕ ಚಿಂತನೆಗಳನ್ನು ಹೇಗೆ ಗ್ರಹಿಸಬೇಕು ಎಂಬುದನ್ನು ಹೇಳಿಕೊಟ್ಟ ಗುರುಗಳಾದ ಪ್ರೊ: ಓ.ಎಲ್. ನಾಗಭೂಷಣಸ್ವಾಮಿ ಅವರಿಗೂ, ಸದಾ ಪ್ರೋತ್ಸಾಹಿಸುವ ಕನ್ನಡ ವಿಶ್ವವಿದ್ಯಾಲಯದ ಎಲ್ಲ ಅಧ್ಯಾಪಕ ವೃಂದಕ್ಕೂ ನನ್ನ ನಮನಗಳು. ಹೊಸ ಚಿಂತನೆಗಳಿಗೆ ಪ್ರೋತ್ಸಾಹಿಸುವ ನನ್ನ ನೆಚ್ಚಿನ ಚರಿತ್ರೆಯ ಗುರುಗಳಾದ ಡಾ: ಎಸ್. ಚಂದ್ರಶೇಖರ್ ಅವರಿಗೂ ನನ್ನ ನಮಸ್ಕಾರಗಳು ಸಲ್ಲಬೇಕು.

ಈ ನಿಬಂಧವನ್ನು ತಯಾರಿಸುವಲ್ಲಿ ಸಾಕಷ್ಟು ಮಾಹಿತಿಗಳನ್ನು, ಪುಸ್ತಕಗಳನ್ನು ಒದಗಿಸಿದ ಆಲೂರರ ಮನೆಯ ಸದಸ್ಯರನ್ನು ನೆನೆಸಿಕೊಳ್ಳದೆ ಇರಲಾರೆ. ಅದರಲ್ಲೂ ಆಲೂರರ ಅಳಿಯಂದಿರಾದ ದಿ: ವರದರಾಜ ಹುಯಿಲಗೋಳ ಮತ್ತು ಅವರ ಶ್ರೀಮತಿ ಇವರಿಗೆ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ. ಅದೇ ರೀತಿಯಲ್ಲಿ ಆಲೂರರ ಬಗ್ಗೆ ತಮ್ಮಲ್ಲಿದ್ದ ಎಲ್ಲ ಆಕರಗಳನ್ನು ಒದಗಿಸಿಕೊಟ್ಟ 'ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ'ಯ ಸಿಬ್ಬಂದಿ ವರ್ಗದವರಿಗೂ ನನ್ನ ನಮನಗಳು ಸಲ್ಲುತ್ತವೆ.

ಸಿ.ಆರ್. ಗೋವಿಂದರಾಜು

(ಸಿ.ಆರ್. ಗೋವಿಂದರಾಜು)

ಸ್ಥಳ: ಹಂಪಿ

ದಿನಾಂಕ: ೨೫-೨-೯೮

# ಪರಿವಿಡಿ

:::

ಅಧ್ಯಾಯ : 1

## ಪ್ರ ವೇ ಶ

'ಕನ್ನಡ — ಕರ್ನಾಟಕತ್ವ'ವನ್ನು ಕುರಿತು ಆಲೂರರ ವಿಚಾರಗಳು ಭಾರತ ಮತ್ತು ಕರ್ನಾಟಕ ಸಂಸ್ಕೃತಿಗಳನ್ನು ಒಂದೇ ದೃಷ್ಟಿಕೋನದಲ್ಲಿ ಇಟ್ಟು ನೋಡುವಂಥದ್ದು. 'ಕನ್ನಡ ಸಂಸ್ಕೃತಿ' ಯ ಬಗ್ಗೆ ಆಲೂರರ ಚಿಂತನೆಯ ನೆಲೆಗಳು ತಮ್ಮದೇ ಆದ ಎಲ್ಲೆಗಳನ್ನು ನಿರ್ವಚಿಸಿಕೊಳ್ಳುತ್ತವೆ. 'ಸಂಸ್ಕೃತಿ' ಎಂಬ ಪರಿಕಲ್ಪನೆಯೇ ಬಹಳ ಸಂಕೀರ್ಣವಾದುದು. ಅದನ್ನು ನಿರ್ದಿಷ್ಟ ವ್ಯಾಖ್ಯೆಯ ಮೂಲಕ ಹಿಡಿದಿಡುವುದು ಅಷ್ಟು ಸುಲಭವಲ್ಲ. ಸಂಸ್ಕೃತಿಯನ್ನು ನಿರ್ವಚಿಸುವ, ಅರ್ಥೈಸುವ ಪ್ರಯತ್ನಗಳಿಂದಲೇ ಮತ್ತೆ ಅದನ್ನು ಸಂಕೀರ್ಣತೆಯ ಕಡೆಗೆ ದೂಡುವ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿರುತ್ತೇವೆ ಅನ್ನಿಸುತ್ತದೆ. ಭಾರತದ ಸಂದರ್ಭದಲ್ಲಿ ಸಂಸ್ಕೃತಿಯ ಚಿಂತನೆ ಮತ್ತಷ್ಟು ಜಟಿಲ. ಏಕೆಂದರೆ ನಮ್ಮಲ್ಲಿ 'ಸಂಸ್ಕೃತಿ' ಎಂದಾಕ್ಷಣವೆ 'ಏಕೀಭಾವ' ದ ನೋಟ ಜಾಗೃತ ಆಗಿಬಿಡುತ್ತದೆ. ನಮ್ಮಲ್ಲಿ ಬೇರು ಬಿಟ್ಟಿರುವ ಗತದ ಬಗೆಗಿನ ಪೂರ್ವಾಗ್ರಹಗಳು ಒಂದೇ ಪರಿಪ್ರೇಕ್ಷ್ಯದಲ್ಲಿ ನೋಡುವಂತೆ ಮಾಡಿವೆ. ವೈಭವೀಕೃತ ಗತವನ್ನು ಬಿಟ್ಟು ಹೊರಗೆ ನಿಂತು ಆಲೋಚಿಸುವುದು ಇಂದಿಗೂ ಸಾಧ್ಯ ಆಗುತ್ತಿಲ್ಲ. ಬಹುಶಃ ಈ ರೀತಿಯ ಚಿಂತನೆಗೆ ವಸಾಹತುಶಾಹಿ ಆಡಳಿತವೆ ಕಾರಣವಾಗಿ ಪರಿಣಮಿಸುತ್ತದೆ. ಆಡಳಿತಶಾಹಿಗೆ ವಶವಾಗಿದ್ದ ನಮ್ಮ ಮನೋಜೀವನ ಹಾಗೂ ಅದಕ್ಕೆ ಪ್ರತಿಕ್ರಿಯಿಸಲು ನಾವು ಅಂತಿಮ ಮಾಡಿಕೊಂಡ ವಿಭಿನ್ನ ಆಯಾಮಗಳು ಇಂದಿಗೂ ನಮ್ಮನ್ನು ಸಂಪೂರ್ಣ ಮುಕ್ತರನ್ನಾಗಿಸಿಲ್ಲ.

ಆಂಗ್ಲರು ನಮ್ಮಲ್ಲಿ ಬಲವಾಗುತ್ತಾ ಹೋದಂತೆಲ್ಲಾ ಅವರ ವೈಚಾರಿಕ ನೆಲೆಗಳೂ ಸಹ ನಮ್ಮನ್ನು ಸುತ್ತುವರೆಯುತ್ತಾ ಹೋದುವು. ಪರಿಣಾಮವೆಂದರೆ 'ರಾಷ್ಟ್ರೀಯ ಪ್ರಜ್ಞೆ' ಎಂಬುದು ಜಾಗೃತಗೊಳ್ಳುವಷ್ಟರ ಮಟ್ಟಿಗೆ ವಸಾಹತುಶಾಹಿ ಧೋರಣೆಗಳು ಸವಾಲು

ಗಳನ್ನು ಒಡ್ಡಿದವು. ಅಂದಿನ ಸವಾಲುಗಳಿಗೆ ವೈಚಾರಿಕವಾಗಿ ಪ್ರತಿಭಟಿಸಲು ಶಕ್ತರಾಗಿದ್ದವರು ನಮ್ಮಲ್ಲಿನ ಮೇಲ್ವರ್ಗದ ಆಂಗ್ಲ ವಿದ್ಯಾವಂತರೇ ಆಗಿದ್ದರು. ಈ ವರ್ಗ ತಮ್ಮ ಚಿಂತನೆಗೆ ಬಳಸಿಕೊಳ್ಳುತ್ತಿದ್ದುದು ಪಾಶ್ಚಾತ್ಯ 'ಟ್ರೈನಿಂಗ್' ಅನ್ನೇ. ಈ ರೀತಿಯ ಟ್ರೈನಿಂಗ ಗಳಿಂದ ದತ್ತವಾದ ಚಿಂತನೆಗಳಲ್ಲಿ 'ಓರಿಯಂಟಲಿಸ್ಟ್' ತಾತ್ವಿಕ ಚಿಂತನೆಯೂ ಒಂದು. ಓರಿಯಂಟಲಿಸ್ಟರ ವಿಚಾರಧಾರೆ ಭಾರತೀಯ ಸಂಸ್ಕೃತಿಯನ್ನು ನಿರ್ವಚಿಸಿದ್ದು ತಮ್ಮದೇ ಆದ ಕಲ್ಪನೆಗಳ ಹಿನ್ನೆಲೆಯಲ್ಲಿ. ಇವರ ಚಿಂತನೆಯಲ್ಲೂ 'ಸಂಸ್ಕೃತಿ' ಯು ಚರಿತ್ರೆ ಎಂಬುದು ರಾಜ — ಮಹಾರಾಜರ ವೈಭವಯುತ ಆಳ್ವಿಕೆ, ಯುದ್ಧ — ಗೆಲುವು, ವಿಜಯದ ಪತಾಕೆ, ಸಮೃದ್ಧಿ — ಸಂತೃಪ್ತಿ, ಧರ್ಮಗಳಿಗೆ ರಾಜಾಶ್ರಯ, ಜಯದ ಕುರುಹಿಗೆ ದೇವಾಲಯಗಳ ನಿರ್ಮಾಣ, ದಾನ — ದತ್ತಿಗಳ ಕೊಡುಗೆ ಮೊದಲಾದ ವಿಚಾರಗಳನ್ನು ಒಳಗೊಂಡಿತ್ತು. ಇಂಥ ವಿಚಾರಗಳನ್ನು ಬಹಳ ಬೇಗ ತಮ್ಮದನ್ನಾಗಿಸಿಕೊಂಡ ಭಾರತೀಯ ಸಂದರ್ಭ 'ಹಿಂದೂ ರಾಷ್ಟ್ರೀಯವಾದ' ದ ಅರಿವನ್ನು ಮೂಡಿಸಲು ಆರಂಭಿಸಿತು. ಈ ಮಾತು ಕರ್ನಾಟಕದ ಸಂದರ್ಭಕ್ಕೂ ಅನ್ವಯಿಸುತ್ತದೆ.

ರಾಷ್ಟ್ರೀಯತೆಯ ಪ್ರಜ್ಞೆ ಹೆಚ್ಚು ಜನರನ್ನು ಆವರಿಸುತ್ತಿದ್ದುದು ತನ್ನ 'ಹಿಂದುತ್ವ ಪ್ರಜ್ಞೆ' ಯಿಂದಲೇ ಎಂಬುದನ್ನು ಮರೆಯುವಂತಿಲ್ಲ. ನಮ್ಮಲ್ಲಿನ ಕೆಲವು ಬುದ್ಧಿಜೀವಿಗಳು ವಸಾಹತುಶಾಹಿ ನೀತಿಗೆ ಪ್ರತಿಕ್ರಿಯಿಸುವ ತೀವ್ರತೆಯಲ್ಲಿ 'ಓರಿಯಂಟಲಿಸ್ಟ್' ರಿಗಿಂತಲೂ ಒಂದು ಹೆಜ್ಜೆ ಮುನ್ನಡೆದರು. ಹಾಗೆ ಮುಂದುವರೆಯುವುದರ ಮೂಲಕ ತಮ್ಮ ವೈಭವೀ 'ಭೂತ' ದ ಮೊರೆ ಹೊಕ್ಕರು. ಇದರಿಂದ ಎಲ್ಲ ಬಗೆಯ 'ಸುವರ್ಣ ಯುಗ' ಗಳ ಸಾಕ್ಷಾತ್ಕಾರದ ದರ್ಶನ ಮಾಡಿಸುವಂತೆ ಆಯಿತು. ಆದ್ದರಿಂದಲೇ ವೈದಿಕ ಹಿನ್ನೆಲೆಯ 'ಏಕ ಮುಖ' ವಿಚಾರಗಳು ಹೊಳೆದದ್ದು. ಆದರೆ ಭಾರತೀಯ ಸಮಾಜದ 'ಬಹುಮುಖಿ' ನೆಲೆಗಳು ಅವರ ಅರಿವಿಗೆ ಬರಲೇ ಇಲ್ಲ. ಇಂಥ ವೈಚಾರಿಕ ಚಿಂತನೆ ಭಾರತೀಯ ಅಥವಾ ಕರ್ನಾಟಕ ಸಂಸ್ಕೃತಿಯನ್ನು ಸಂಪೂರ್ಣ ಗ್ರಹಿಸಲು ವಿಫಲವನ್ನಾಗಿಸಿತು. ಈ ಹಿನ್ನೆಲೆಯಲ್ಲಿಯೇ ಆಲೂರರ ಕನ್ನಡ — ಕರ್ನಾಟಕತ್ವದ ಚಿಂತನೆಗಳು 'ಓರಿಯಂಟಲಿಸ್ಟ್' ಹಾಗೂ ತದನಂತರದ 'ಬಲಿಷ್ಠ ರಾಷ್ಟ್ರೀಯವಾದ' ದ ಪಂಥಗಳಿಗೆ ಹತ್ತಿರ ಆಗುವುದು. ಆಲೂರರ ವಿಚಾರಗಳು ಇವರ ವಿಚಾರಗಳಿಗಿಂತ ಭಿನ್ನವಾಗಿವೆ ಅನ್ನಿಸುವುದಿಲ್ಲ.

ಮಾನಸಿಕ ಹಾಗೂ ಭೌತಿಕವಾದ ಎಲ್ಲ ಪ್ರಕ್ರಿಯೆಗಳನ್ನು ಒಳಗೊಂಡ 'ಸಂಸ್ಕೃತಿ' ಯ
ಚಿಂತನೆಯು ಉಳಿದ ವಿಭಿನ್ನ ಆಯಾಮಗಳ ಜೊತೆಗೆ ಭಾಷಿಕ ನೆಲೆಗಳನ್ನೂ ಸಹ ಗುರುತಿಸಿ
ಕೊಳ್ಳುವಂಥದ್ದು. ಆಯಾಯ ಭಾಷೆಗಳನ್ನು ಆಡುವ ಜನರು ತಮ್ಮನ್ನು ತಾವು ಪರಿಚಯಿಸಿ
ಕೊಳ್ಳುವುದು (ಗುರುತಿಸಿಕೊಳ್ಳುವುದು) ಅವರವರ ಭಾಷೆಗಳಿಂದಲೇ. ಅಂದರೆ ಇಲ್ಲಿ ಒಂದು
ನಿರ್ದಿಷ್ಟ ಜನ ಹಾಗೂ ಅವರು ಆಡುವಂಥ ಭಾಷೆ ಯಾವುದೇ ಸಂಸ್ಕೃತಿಗೂ ಸಂವಹನಿಸುವ ಎರಡು
ಪ್ರಮುಖ ಅಂಶಗಳಾಗಿರುತ್ತವೆ. ಇವೆರಡರ ಜೊತೆ ಜೊತೆಗೆ ನಿರ್ದಿಷ್ಟ ಭೌಗೋಳಿಕ ಪರಿಸರವೊಂದು
ತನ್ನದೇ ಮೇರೆಗಳನ್ನು ಕಟ್ಟಿಕೊಳ್ಳುತ್ತಿರುತ್ತದೆ. ಆ ಮೂಲಕವೇ ಒಂದು ಸಾಂಸ್ಕೃತಿಕ
ಚೌಕಟ್ಟು ನಿರ್ಮಾಣ ಆಗುವುದು. ಆದ್ದರಿಂದ ಒಂದು ಭಾಷೆ, ಅದನ್ನು ಆಡುವ ಜನ ಹಾಗೂ
ಅವರು ವಾಸಿಸುವ ಪ್ರದೇಶ — ಇವು ಮೂರು ತಮ್ಮದೇ ಆದ ಒಳಸಂಬಂಧಗಳನ್ನು ಇಟ್ಟು
ಕೊಂಡಿರುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆ, ಕನ್ನಡಿಗರು, ಕರ್ನಾಟಕ ಪರಿಕಲ್ಪನೆ
ಗಳನ್ನು ಇಟ್ಟು ನೋಡಬೇಕಾಗಿದೆ. ಇವು ಮೂರು ಮೇಲ್ನೋಟಕ್ಕೆ ಒಂದೇ ಅನ್ನಿಸಿದರೂ
ಅವು ಒಂದೇ ಆಗಿರುವುದಿಲ್ಲ. ಸೂಕ್ಷ್ಮವಾದ, ಜಟಿಲವಲ್ಲದ, ತೆಳುವಾದ ಪೊರೆಯೊಂದು ಈ
ಮೂರೂ ಅಂಶಗಳನ್ನು ಬೇರ್ಪಡಿಸುತ್ತಿರುತ್ತದೆ. ಒಂದು ನಿರ್ದಿಷ್ಟ ಸಾಂಸ್ಕೃತಿಕ ಸಂದರ್ಭದಲ್ಲಿ
ಇವು ಮೂರು ಒಂದರಲ್ಲಿ ಮತ್ತೊಂದು ಬೆರೆಯುವುದರ ಮೂಲಕ ಅಭಿವ್ಯಕ್ತಿಗೊಳ್ಳುತ್ತವೆ.
ಇಂಥ ಒಳನೋಟಗಳನ್ನು ಹುಡುಕುವ ಪ್ರಯತ್ನವನ್ನು ಈ ನಿಬಂಧದಲ್ಲಿ ಮಾಡಲಾಗಿದೆ.

ಕನ್ನಡ — ಕನ್ನಡಿಗ — ಕರ್ನಾಟಕ ಈ ಪರಿಕಲ್ಪನೆಗಳು ಬ್ರಿಟಿಷ್ ವಸಾಹತುಶಾಹಿ ಧೋರಣೆ
ಯಲ್ಲಿ ಛಿದ್ರವಾಗಿದ್ದವು. ಸಾಂಸ್ಕೃತಿಕ, ರಾಜಕೀಯ ಹಾಗೂ ಭೌಗೋಳಿಕವಾಗಿಯೂ
ಇದಕ್ಕಿಂತ ಭಿನ್ನವಾದ ಸ್ಥಿತಿಯನ್ನೇನೂ ನೋಡಲು ಸಾಧ್ಯ ಇಲ್ಲ. ಇದು ಈ ಶತಮಾನದ
ಆರಂಭದಲ್ಲಿ ಇದ್ದಂಥ ನೋಟ. ಭೌತಿಕವಾಗಿ ಹಾಗೂ ಮಾನಸಿಕವಾಗಿ ಅನೇಕ ರೀತಿಯ
ಮೂಲಭೂತ ಅವಸ್ಥಾಂತರಗಳನ್ನು ಅಂದಿನ ಅಧಿಕಾರಶಾಹಿ ತಂದು ಒಡ್ಡುತ್ತಿತ್ತು. ಇದರಿಂದ
ರಾಷ್ಟ್ರೀಯ ಮಟ್ಟದಲ್ಲಿ ಸವಾಲುಗಳನ್ನು ಎದುರಿಸುವ ಪ್ರಯತ್ನಗಳು ಆರಂಭಗೊಂಡವು.
ನಮ್ಮ ಗತವನ್ನು, ಸಂಸ್ಕೃತಿಯನ್ನು (ಸನಾತನ ಧರ್ಮದ ಸಂಸ್ಕೃತಿಯೇ ಆಗಿದೆ) ವೈಭವೀ
ಕರಿಸುವ ಭಾವುಕತೆಯ ಪ್ರಯತ್ನಗಳು ಅಂದು ಎಲ್ಲೆಡೆ ಚಾಲ್ತಿಯಲ್ಲಿ ಇದ್ದವು. ಇಂಥ ಸನ್ನಿವೇಶ
ದಲ್ಲಿ ಕನ್ನಡ ಮಾತನಾಡುವ ವಿಭಜಿತ ಪ್ರದೇಶಗಳೂ ಸಹ ಇದಕ್ಕಿಂತಲೂ ಭಿನ್ನವಾಗಿ ಪ್ರತಿಕ್ರಿಯಿಸಲು

ಸಾಧ್ಯ ಆಗುತ್ತಿರಲಿಲ್ಲ. ಇಲ್ಲಿಯೂ ಭಾವುಕತೆಯ ಪರಿಕರಗಳನ್ನೇ ಅಸ್ತ್ರಗಳನ್ನಾಗಿ ಬಳಸಿಕೊಳ್ಳಲಾಯಿತು. ಅಂದು ಭಾರತದ ಸಂಸ್ಕೃತಿ ಎಂದರೆ ಹಿಂದೂವಾದಿ (ವೈದಿಕ) ಸಂಸ್ಕೃತಿಯೇ ಆಗಿದ್ದುದರಿಂದ ಕರ್ನಾಟಕವೂ ಸಹ ಅಂಥದ್ದೇ ಪ್ರತಿರೂಪವನ್ನು ಧರಿಸಿತ್ತು. ನಮ್ಮಲ್ಲಿ ನಡೆದ ಪ್ರಯತ್ನಗಳಲ್ಲಿ ವೈದಿಕ ಎನ್ನುವ ಸಂಸ್ಕೃತಿಯನ್ನು ಆತ್ಮರಕ್ಷಣೆಯ ಸಾಧನವನ್ನಾಗಿ ಬಳಸಿಕೊಂಡವರು ಅನೇಕ ಮಂದಿ ಇದ್ದಾರೆ. ಅಂಥ ವಕ್ತಾರರಲ್ಲಿ ಆಲೂರ ವೆಂಕಟರಾಯರು (1880 — 1964) ಪ್ರಮುಖರು. ಇವರು ಅಂದಿನ ಸಂದರ್ಭಕ್ಕೆ ತಕ್ಕಂತೆ ಕನ್ನಡಿಗರನ್ನು ಸಜ್ಜುಗೊಳಿಸುವ ಪ್ರಯತ್ನಗಳನ್ನು ಮಾಡಿದ್ದಾರೆ.

ಈ ನಿಬಂಧದಲ್ಲಿ ಆಲೂರರ ಕೌಟುಂಬಿಕ ಹಿನ್ನೆಲೆಯಿಂದ ಹಿಡಿದು ಅವರು ಕನ್ನಡ — ಕರ್ನಾಟಕತ್ವಗಳ ಸಾಕಾರ ರೂಪವನ್ನು ನೋಡುವವರೆಗೆ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಲಾಗಿದೆ. ಅವರ ಜೀವನವನ್ನು ಉದಾತ್ತ ಆಶಯಗಳ ಕಡೆಗೆ ತಿರುಗಿಸಿದಂಥ ಪರಿಸರದ ಪ್ರಭಾವ ಮುಖ್ಯವಾದುದು. ಅದರ ಪರಿಣಾಮದಿಂದ ಅಂದಿನ ಚಾರಿತ್ರಿಕ ಘಟ್ಟಗಳಲ್ಲಿ, ವಿಭಿನ್ನ ರೀತಿಯ ಸವಾಲುಗಳಿಗೆ ತಮ್ಮ ವೈಚಾರಿಕ ಚಿಂತನೆಯ ಮೂಲಕ ಉತ್ತರ ಕೊಡುವ ಆಲೂರರನ್ನು ವಿಶ್ಲೇಷಿಸುವುದು ಇಲ್ಲಿ ಮುಖ್ಯ ಆಗಿರುತ್ತದೆ.

ಭಾರತದ ಸ್ವಾತಂತ್ರ್ಯ ಹೋರಾಟ ಹಾಗೂ ಅಖಂಡ ಕರ್ನಾಟಕ ನಿರ್ಮಾಣದ ಆಶಯಗಳು ಕನ್ನಡಿಗರನ್ನು ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸುವಂತೆ ಮಾಡಿದ್ದವು. ಆಲೂರ ವೆಂಕಟರಾಯರಂಥವರು ಇಂಥ ಸ್ಥಿತಿಯಲ್ಲಿ ಇವೆರಡನ್ನೂ ಗಮನದಲ್ಲಿ ಇಟ್ಟುಕೊಂಡು ಕನ್ನಡಿಗರನ್ನು ಸಜ್ಜುಗೊಳಿಸಬೇಕಿತ್ತು. ನಮಗೆ ಅವರು ಪ್ರಸ್ತುತರಾಗುವುದು ಇಲ್ಲಿ ಅನ್ನಿಸುತ್ತದೆ. ‘ಒಡೆದು ಆಳುವ’ ನೀತಿಯ ಸನ್ನಿವೇಶದಲ್ಲಿ ಅವರ ಚಿಂತನ, ಕಾರ್ಯಚಟುವಟಿಕೆಗಳು ಯಾವ ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತಿದ್ದವು ಎಂಬುದನ್ನು ಪ್ರಸ್ತುತ ನಿಬಂಧದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ‘ಕನ್ನಡ’ ಭಾಷೆಯನ್ನು ‘ಕರ್ನಾಟಕ’ ಎಂಬ ಪ್ರದೇಶದ ಭಾಷೆಯನ್ನಾಗಿ ಎತ್ತಿ ತೋರಿಸುವುದರ ಮೂಲಕ ‘ಕನ್ನಡಿಗ’ರನ್ನು ಒಂದುಗೂಡಿಸಿದ ಆಲೂರರ ಪ್ರಯತ್ನ ಇಲ್ಲಿ ಮುಖ್ಯವಾದುದು. ಆ ಮೂಲಕವೇ ಪರಕೀಯ (ಬ್ರಿಟಿಷ್) ಆಕ್ರಮಣದಿಂದ ಮುಕ್ತರಾಗಬೇಕಾದ ಒತ್ತಡ, ಅನಿವಾರ್ಯತೆ ಅಂದು ಇತ್ತು.

ಪ್ರಸ್ತುತ ನಿಬಂಧದಲ್ಲಿ ಕನ್ನಡ — ಕರ್ನಾಟಕತ್ವವನ್ನು ಕುರಿತ ಆಲೂರರ ಚಿಂತನೆ ಎಂಥದ್ದು ಎಂಬುದನ್ನು ತಿಳಿಯುವುದರ ಜೊತೆಗೆ ಅದರ ವಿಶ್ಲೇಷಣೆಯನ್ನು ಮಾಡುವ ಪ್ರಯತ್ನವೂ ನಡೆದಿದೆ. ಇದರಲ್ಲಿ ಆಲೂರರು 'ತಾನು ಕನ್ನಡಿಗ' ಎಂದು ಗುರುತಿಸಿಕೊಂಡ ಸನ್ನಿವೇಶ ಹಾಗೂ ಎಲ್ಲರನ್ನೂ ಅದೇ ಪರಿಧಿಯಲ್ಲಿ ಬರುವಂತೆ ಮಾಡಿದ ಪ್ರಯತ್ನ (1905 ರಿಂದ 1956) ಇವೆರಡೂ ನಿಬಂಧದ ಮಿತಿಗಳು. ಅವರು ನಡೆಸಿದ ಕನ್ನಡ — ಕರ್ನಾಟಕದ ಬಗೆಗಿನ ಆಲೋಚನೆಗಳು ವಿಭಿನ್ನ ಚಾರಿತ್ರಿಕ ಘಟ್ಟಗಳಲ್ಲಿ ಯಾವ ರೀತಿಯಲ್ಲಿ ಪರಿಣಾಮ ಬೀರಿದವು ಎಂಬುದು ಒಂದು ಪ್ರಶ್ನೆಯೇ ಆಗಿದೆ. ಅದೇ ರೀತಿಯಲ್ಲಿ ಕರ್ನಾಟಕ — ಭಾರತ, ಕನ್ನಡ — ಇತರೆ ಭಾಷೆಗಳು, ಕರ್ನಾಟಕ — ನೆರೆರಾಜ್ಯಗಳು, ರಾಜಕಾರಣ, ರಾಷ್ಟ್ರೀಯತೆ, ಧರ್ಮ, ಸಂಸ್ಕೃತಿ, ಪತ್ರಿಕೋದ್ಯಮ, ಸಮಾಜ, ಆಧ್ಯಾತ್ಮಿಕತೆ, ಸಾಹಿತ್ಯ, ಚರಿತ್ರೆ — ಹೀಗೆ ಹತ್ತು ಹಲವು ನೆಲೆಗಳಲ್ಲಿನ ಅವರ ಚಿಂತನೆ ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಗುರುತಿಸಬೇಕಿದೆ. ಜೊತೆಜೊತೆಗೆ ವಿಮರ್ಶಾತ್ಮಕ ವಿಶ್ಲೇಷಣೆಯನ್ನೂ ಸಹ ಅಂದಿನ ಸನ್ನಿವೇಶಗಳಲ್ಲಿಯೇ ಇಟ್ಟು ಮಾಡುವುದು ಈ ನಿಬಂಧದ ಆಶಯ ಆಗಿರುತ್ತದೆ.

ಭಾರತದಲ್ಲಿ ಭಾಷೆ, ಪ್ರದೇಶ, ಜಾತಿ, ಜನಾಂಗ, ಧರ್ಮ, ಲಿಂಗ ಮೊದಲಾದವುಗಳ ಮೂಲಕ ಪ್ರತ್ಯೇಕತೆಯನ್ನು ಎತ್ತಿಹಿಡಿಯುವ ಚಳುವಳಿಗಳು ಇಂದಿಗೂ ನಡೆಯುತ್ತಿವೆ. ವಸಾಹತುಶಾಹಿ ಸಂದರ್ಭದಿಂದ ದತ್ತವಾದ ಚಿಂತನೆಗಳೇ ನಮ್ಮ ಸಂಸ್ಕೃತಿಯ ವಿವರಣೆ, ವಿಶ್ಲೇಷಣೆಗಳಿಗೆ ಮುಖ್ಯ ಭಿತ್ತಿಯಾಗಿರುವುದೇ ಇದಕ್ಕೆ ಪ್ರಮುಖ ಕಾರಣ ಅನ್ನಿಸುತ್ತದೆ. ಇವೆಲ್ಲವುಗಳನ್ನು ಗಮನದಲ್ಲಿ ಇಟ್ಟುಕೊಂಡು ಆಲೂರರ ಕನ್ನಡ — ಕರ್ನಾಟಕತ್ವದ ತಾತ್ವಿಕ ಚಿಂತನೆಯನ್ನು ವಿಶ್ಲೇಷಣೆಗೆ ಒಳಪಡಿಸುವುದು ಸೂಕ್ತ. ಅವರು ಹುಟ್ಟುಹಾಕಿದ ವಿಚಾರಗಳು, ಚಳುವಳಿಗಳು ಇಂದು ಭಿನ್ನರೂಪ ತಳೆಯುತ್ತಿವೆ. ಇದಕ್ಕೆ ನಮ್ಮಲ್ಲಿ ಇಂದು ಮನೆಮಾಡಿಕೊಂಡಿರುವ ಆಲೋಚನೆಗಳೇ ಕಾರಣ. ಆದ್ದರಿಂದ ಆಲೂರರ ಚಿಂತನೆ ಎಂಥದ್ದು ಎಂಬುದನ್ನು ಅರಿಯು ಬೇಕಾಗಿರುವ ತುರ್ತು ಇಂದು ಇದೆ. ಪ್ರತ್ಯೇಕತೆಯ, ಕೋಮುವಾದದ ಇಂದಿನ ಸ್ಥಿತಿಗೆ ಚರಿತ್ರೆಯಲ್ಲಿ ಇಟ್ಟಂಥ ತಪ್ಪು ಹೆಜ್ಜೆಗಳು ಕಾರಣವಾಗಿವೆ. ಈ ನಿಟ್ಟಿನಲ್ಲಿ ನಮ್ಮನ್ನು ನಾವು ಇಂದು ವಿಮರ್ಶೆಗೆ ಒಳಪಡಿಸಿಕೊಳ್ಳಬೇಕಿದೆ. ಅಂದಿನ ಸ್ಥಿತಿಯೇ ಬೇರೆ. ಸಮಕಾಲೀನ ಸಮುದಾಯದ ಆವಶ್ಯಕತೆಯೇ ಬೇರೆ. ಈ ರೀತಿಯ ಹಲವು ವಿಚಾರಗಳ ಹಿನ್ನೆಲೆಯಲ್ಲಿ ಪ್ರಸ್ತುತ

ನಿಬಂಧ ಉತ್ತರಗಳನ್ನು ಹುಡುಕುವ ಪ್ರಯತ್ನ ಮಾಡುತ್ತದೆ.

ಆಲೂರರ ಭಾಷೆ ಮತ್ತು ಪ್ರಾಂತ್ಯದ ಬಗೆಗಿನ ಕಳಕಳಿಯನ್ನು ಇಂದು ಯಾವ ರೀತಿಯಲ್ಲಿ ಗುರುತಿಸಿಕೊಳ್ಳಲು ಸಾಧ್ಯ? ಅಂದಿನ ಸಮಸ್ಯೆಗೆ ಕರ್ನಾಟಕತ್ವದ ಕಲ್ಪನೆ ಪರಿಹಾರ ಕಂಡುಕೊಂಡಂತೆ ಇಂದಿನ ಸಮಸ್ಯೆಗಳನ್ನು ಬಗೆಹರಿಸುತ್ತದೆಯೆ ಎಂಬುದನ್ನೂ ಸಹ ಆಲೋಚಿಸಬೇಕಿದೆ. ಅಲ್ಲದೆ ಕರ್ನಾಟಕವು ಭಾರತದ ಹಾಗೂ ಪ್ರಪಂಚದ ಮಟ್ಟದಲ್ಲಿ ತನ್ನನ್ನು ತಾನು ಅಭಿವ್ಯಕ್ತಿಸಿಕೊಳ್ಳಲು ಯಾವ ರೀತಿಯ ಸ್ವಾಭಿಮಾನದ ಪ್ರಯತ್ನಗಳನ್ನು ಅಂತರ್ಗತ ಮಾಡಿಕೊಳ್ಳಲು ಸಾಧ್ಯ ಎಂಬುದನ್ನೂ ಸಹ ನಾವಿಂದು ಯೋಚಿಸುವುದು ಸೂಕ್ತ. ಈ ಹಿನ್ನೆಲೆಯಲ್ಲೂ ಕರ್ನಾಟಕತ್ವದ ಚಿಂತನೆಯನ್ನು ನೋಡಬೇಕಿದೆ.

: : :

ಅಧ್ಯಾಯ : 2

## ಆಲೂರ ವೆಂಕಟರಾಯರು : ಪರಿಚಯ ಮತ್ತು ಅವರನ್ನು ಪ್ರಭಾವಿತರನ್ನಾಗಿಸಿದ ಪರಿಸರ

ಆಲೂರ ವೆಂಕಟರಾಯರು ಸಾಹಿತಿಯಾಗಿ, ಸಂಶೋಧಕರಾಗಿ, ಚರಿತ್ರಕಾರರಾಗಿ, ಪತ್ರಿಕೋದ್ಯಮಿ — ಪ್ರಕಾಶಕರಾಗಿ, ಸಂಘಟಕರಾಗಿ, ರಾಜಕಾರಣಿಯಾಗಿ, ಆಧ್ಯಾತ್ಮಿಕ ಚಿಂತಕರಾಗಿ — ಹೀಗೆ ಹತ್ತು ಹಲವು ನೆಲೆಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಆದರೆ ಅವರು ತಮ್ಮನ್ನು ತಾವು ಗುರುತಿಸಿಕೊಂಡಿರುವುದು ಮಾತ್ರ ಕನ್ನಡ — ಕರ್ನಾಟಕದ ಹಿತಚಿಂತಕರಲ್ಲಿ ಒಬ್ಬರಾಗಿ. ಅವರನ್ನು ಸಮಕಾಲೀನ ಪ್ರಪಂಚ ನೋಡುವುದು ಈ ನೋಟದಲ್ಲಿಯೇ. ಇಂಥ ಒಬ್ಬ ಹಿತಚಿಂತಕನ ಕಿರುಪರಿಚಯ ಹಾಗೂ ಅವರು ಕರ್ನಾಟಕದ ಬಗ್ಗೆ ಅಭಿಮಾನವನ್ನು ಹೊಂದುವಂತೆ ಮಾಡಿದ ಅಂದಿನ ಸ್ಥಿತಿ — ಗತಿಗಳ ಪ್ರಭಾವವನ್ನು ಅರಿಯುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ವೆಂಕಟರಾಯರ ಮನೆತನ ಮೂಲತಃ ಬಳ್ಳಾರಿ ಜಿಲ್ಲೆಯದು. ಇವರ ಮುತ್ತಜ್ಜ ಒಬ್ಬ ಮುಲ್ಕಿ ಅಧಿಕಾರಿ. 1829ರಲ್ಲಿ ಧಾರವಾಡಕ್ಕೆ ವರ್ಗ ಆಗಿದ್ದರು. ಇವರಿಗೆ ಜಹಗೀರಾಗಿ ದೊರೆತದ್ದು ಧಾರವಾಡದ ರೋಣ ತಾಲೂಕಿನ 'ಹೊಳೆ ಆಲೂರ'. ಈ ಕಾರಣದಿಂದಲೇ ಇಡೀ ಮನೆತನವೆ 'ಆಲೂರ ಮನೆತನ' ಎಂದು ಖ್ಯಾತಿ ಪಡೆದದ್ದು. ವೆಂಕಟರಾಯರ ತಂದೆ ಭೀಮರಾವ್. ತಾಯಿ ಭಾಗೀರಥಿ ಬಾಯಿ. ತಂದೆ 'ಲೋಕಲ ಫಂಡ ಪರೀಕ್ಷೆ' ಯಲ್ಲಿ ಉತ್ತೀರ್ಣರಾಗಿ ಕಾರಕೂನ ನೌಕರಿಗೆ ಸೇರಿದರು. ಕ್ರಮೇಣ ಕಂದಾಯ ಇಲಾಖೆಯ ಶಿರಸ್ತೆದಾರ, ಮಹಾಲಕರಿ, ಮಾಮಲೇದಾರರಾಗಿ ಬಡ್ತಿ ಪಡೆದರು.

ಆಲೂರ ವೆಂಕಟರಾಯರು ಹುಟ್ಟಿದುದು 1880ರ ಜುಲೈ 12ರಂದು, ಬಿಜಾಪುರ ಜಿಲ್ಲೆಯಲ್ಲಿ. ತಂದೆ ಅವರಿಗೆ ವರ್ಗ ಆದಂತೆಲ್ಲಾ ಆಲೂರರೂ ಸಹ ತಮ್ಮ ಪ್ರಾಥಮಿಕ ಶಿಕ್ಷಣವನ್ನು ನವಲಗುಂದ, ಗದಗ, ಹಾನಗಲ್ಲಗಳಿಗೆ ವರ್ಗಾಯಿಸಬೇಕಾಯಿತು. ಆಂಗ್ಲ ಶಿಕ್ಷಣವನ್ನು ಆರಂಭಿಸಿದುದು ಧಾರವಾಡದಲ್ಲಿ. 1897ರಲ್ಲಿ ಮೆಟ್ರಿಕ್ಯುಲೇಷನ್ ಪಾಸಾದರು. ಅನಂತರ ಆಲೂರರು ಕಾಲೇಜು ವ್ಯಾಸಂಗಕ್ಕಾಗಿ ಪುಣೆಗೂ, ವಕೀಲ ವ್ಯಾಸಂಗಕ್ಕಾಗಿ ಮುಂಬಯಿಗೂ ಹೋಗಬೇಕಾಯಿತು.

ಅಂದು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿದ್ದ ಪ್ರಾಂತ್ಯಗಳಲ್ಲಿ ಮುಂಬಯಿ ಪ್ರಾಂತ್ಯವೇ ದೊಡ್ಡದು. ಈ ಪ್ರದೇಶ ಮರಾಠಿ, ಕನ್ನಡ, ಗುಜರಾತಿ ಮತ್ತು ಸಿಂಧಿ ಭಾಷಿಕರನ್ನೊಳಗೊಂಡಿತ್ತು. ಧಾರವಾಡ, ಕಾರವಾರ, ಬಿಜಾಪುರ, ಬೆಳಗಾವಿ — ಈ ನಾಲ್ಕು ಜಿಲ್ಲೆಗಳು ಆಡಳಿತದ ದೃಷ್ಟಿಯಿಂದ ಮುಂಬಯಿಗೆ ಸೇರಿದ್ದವು. ಉತ್ತರ ಕರ್ನಾಟಕದ ಈ ಜಿಲ್ಲೆಗಳು ಎಷ್ಟು ಮರಾಠಿಮಯವಾಗಿ ಹೋಗಿದ್ದವು ಅಂದರೆ 'ಸದರ್ನ್ ಮರಾಠ ಕಂಟ್ರಿ' ಎಂದು ಕರೆಯುವಷ್ಟರ ಮಟ್ಟಿಗೆ. ಉಳಿದಂತೆ ರಾಯಚೂರು, ಗುಲ್ಬರ್ಗ, ಬೀದರಗಳು ಹೈದರಾಬಾದಿಗೂ, ಬಳ್ಳಾರಿ, ದಕ್ಷಿಣ ಕನ್ನಡ ಜಿಲ್ಲೆಗಳು ಮದರಾಸಿಗೂ ಸೇರಿದ್ದವು. ಹಳೆಯ ಮೈಸೂರಿನ ಜಿಲ್ಲೆಗಳು ಮೈಸೂರು ಸಂಸ್ಥಾನಕ್ಕೂ, ಕೊಡಗು ಪ್ರತ್ಯೇಕ ಕಮಿಷನರ್ ಆಡಳಿತಕ್ಕೂ ಒಳಪಟ್ಟಿದ್ದ ಅಂದಿನ ಕರ್ನಾಟಕದ ಸಂದರ್ಭ ಐದು ವಿಭಾಗಗಳಲ್ಲಿ ಹಂಚಿಹೋಗಿತ್ತು. ಇಂಥ ವಿಭಾಗ ಕ್ರಮವೇ ಆಲೂರರಂಥವರನ್ನು ಏಕೀಕೃತ ಕರ್ನಾಟಕದ ನಿರ್ಮಾಣದ ಕಡೆಗೆ ಆಲೋಚಿಸುವಂತೆ ಮಾಡಿದುದು.

19ನೆಯ ಶತಮಾನದ ಎರಡನೆಯ ಹಂತದಲ್ಲಿ ಭಾರತೀಯರಲ್ಲಿ ಹೊಸ ವೈಚಾರಿಕ ಮನೋಭಾವದ ಪ್ರವೃತ್ತಿ ಬೆಳೆಯಿತು. ಪಾಶ್ಚಾತ್ಯ, ಅದರಲ್ಲೂ ಆಂಗ್ಲ ಶಿಕ್ಷಣ, ವಿಚಾರಗಳು ಭಾರತೀಯ ಶಿಕ್ಷಣ ಮತ್ತು ಸಂಸ್ಕೃತಿಯ ಮೇಲೆ ಪ್ರಭಾವ ಬೀರಿದುವು. ಪರಿಪಕ್ವ ಆಲೋಚನೆ (ಚಿಂತನೆಯ) ಯ ಜೊತೆಗೆ ಸಂಘಟನಾತ್ಮಕ ಪ್ರವೃತ್ತಿಗಳು ಜನರಲ್ಲಿ ಬೆಳೆಯತೊಡಗಿದುವು. ದೇಶಭಕ್ತಿ, ಸ್ವಭಾಷೆ, ಸ್ವಸಂಸ್ಕೃತಿ, ಸ್ವಪ್ರಾಂತ್ಯ, ಬಸಿತ ಸಿದ್ಧಾಂತ, ( Drain theory ) ಸಮಾಜ ಸುಧಾರಣೆ, ಸ್ವಾತಂತ್ರ್ಯ — ಇಂಥ ವೈಚಾರಿಕ ಚಿಂತನೆಗಳ ಕಡೆಗೆ ಭಾರತೀಯ ಸಂದರ್ಭ ತನ್ನನ್ನು ತಾನು ಸ್ವಾಗತಿಸಿಕೊಂಡಿತು. ಇದು ಕರ್ನಾಟಕ

ಸಂದರ್ಭಕ್ಕೂ ಅನ್ವಯ ಆಗುತ್ತದೆ. ಈ ರೀತಿಯ ಧೋರಣೆಗಳು, ಚಳುವಳಿಗಳು ಆಂಗ್ಲರ ವಸಾಹತುಶಾಹಿ ನೀತಿಗೆ ಸವಾಲುಗಳನ್ನೊಡ್ಡಿದವು. ಆಲೂರರ ಶಿಕ್ಷಣ – ವಿಚಾರಗಳು ಗರಿಗೆದರಿಕೊಂಡದ್ದು ಇಂಥ ಸ್ಥಿತಿ – ಗತಿಗಳಲ್ಲಿಯೇ.

ಧಾರವಾಡ, ಪುಣೆ, ಮುಂಬಯಿಗಳಲ್ಲಿನ ಅವರ ವಿದ್ಯಾರ್ಥಿ ಜೀವನ ಭಿನ್ನ ರೀತಿಯ ಒತ್ತಡಗಳಿಗೆ, ಆಲೋಚನೆಗಳಿಗೆ ಎಡೆಮಾಡಿಕೊಟ್ಟಿತು. ಈ ಪ್ರದೇಶಗಳಲ್ಲಿನ ಮರಾಠಿ ಮೋಹ, ರಾಷ್ಟ್ರಪ್ರಜ್ಞೆ, ತಮ್ಮತನದ ಅನನ್ಯತೆಯನ್ನು ಕಂಡುಕೊಳ್ಳುವ ಉತ್ಸಾಹ, ಬಗೆಗಳು ಆಲೂರರನ್ನು ಹೆಚ್ಚು ಪ್ರಭಾವಿತರನ್ನಾಗಿಸಿದವು. ಆಗಲೇ ಅವರು ಕನ್ನಡಿಗರನ್ನು – ಮರಾಠಿಗರನ್ನು ತಾಳೆ ನೋಡುವ ತೌಲನಿಕ ಅಧ್ಯಯನ ಮಾಡಿದ್ದು. ತಿಲಕ್, ಗೋಖಲೆ, ವೀರ ಸಾವರ್ಕರ್ ಮೊದಲಾದವರ ಆದರ್ಶಗಳನ್ನು, ವಿಚಾರ – ಚಳುವಳಿಗಳನ್ನು ಬಹಳ ಹತ್ತಿರದಿಂದ ನೋಡುವ ಅವಕಾಶ ಅವರಿಗೆ ಸಿಕ್ಕಿತ್ತು. ಇದರಿಂದಾಗಿ 'ಬಲಿಷ್ಠ ಹಿಂದೂವಾದಿ' ಧೋರಣೆಗಳನ್ನೇ ಮೈಗೂಡಿಸಿಕೊಂಡಿದ್ದರು.

ಉತ್ತರ ಕರ್ನಾಟಕದ ಕನ್ನಡ ಮಾತನಾಡುವ ಪ್ರದೇಶಗಳಲ್ಲಿನ ಕನ್ನಡಿಗರು ಮರಾಠಿ ಮಾತನಾಡುವುದನ್ನು ಹೆಮ್ಮೆಯ ವಿಷಯವೆಂದು ತಿಳಿದುಕೊಂಡಿದ್ದ ಸಂದರ್ಭ ಅದು. ಅಲ್ಲದೆ ಕನ್ನಡ, ಕನ್ನಡಿಗ, ಕರ್ನಾಟಕ ಎಂಬ ವಿಚಾರಗಳ ಬಗ್ಗೆ ಪರಿವೆಯೇ ಇಲ್ಲದೆ ಇದ್ದ ಸನ್ನಿವೇಶ. ಈ ರೀತಿಯ ಪರಿಸರ ಅವರನ್ನು ಕನ್ನಡ – ಕರ್ನಾಟಕದ ಬಗ್ಗೆ ಆಲೋಚಿಸುವಂತೆ ಮಾಡಿತು. ಮುಂದೆ ಅದನ್ನೇ ತಮ್ಮ ಜೀವನದ ಉದ್ದೇಶಕ್ಕೂ ಅನುಸರಿಸಿ ಕೆಲಸ ಮಾಡುವಂತೆ ಪ್ರೇರೇಪಿಸಿತು.

ಆಲೂರ ವೆಂಕಟರಾಯರಲ್ಲಿ ಕನ್ನಡ – ಕರ್ನಾಟಕತ್ವದ ವಿಚಾರಗಳು ಹುಟ್ಟಿಕೊಳ್ಳಲು ಮೂರು ಮುಖ್ಯವಾದ ಪ್ರಸಂಗಗಳು ಕಾರಣವಾಗಿ ಪರಿಣಮಿಸಿವೆ. ಈ ಪ್ರಸಂಗಗಳು ಅವರ ಇಡೀ ಸಾರ್ವಜನಿಕ ಜೀವನವನ್ನು ಕರ್ನಾಟಕತ್ವದ ಪ್ರಸಾರಕ್ಕಾಗಿ ವಿನಿಯೋಗ ಆಗುವಂತೆ ಮಾಡಿದವು. ಅವುಗಳನ್ನು ಸ್ಥೂಲವಾಗಿ ಹೇಳುವುದಾದರೆ,

ಮೊದಲನೆಯದಾಗಿ, ಆಲೂರರ ಪುಣೆಯ ವಿದ್ಯಾರ್ಥಿ ಜೀವನ. ಉನ್ನತ ವ್ಯಾಸಂಗಕ್ಕಾಗಿ ಅಲ್ಲಿಗೆ ಹೋಗಬೇಕಾಗಿದ್ದ ಕನ್ನಡಿಗರು ಸ್ಥಳೀಯವಾದ ಎಲ್ಲ ಅವಮಾನಗಳನ್ನು ಸಹಿಸಿಕೊಳ್ಳಲೇ

ಬೇಕಾಗಿತ್ತು. ಮರಾಠಿ ವಿದ್ಯಾರ್ಥಿಗಳ ಪ್ರಾಬಲ್ಯವೇ ಹೆಚ್ಚು. ಕನ್ನಡ ವಿದ್ಯಾರ್ಥಿಗಳು ಅಲ್ಪಸಂಖ್ಯಾತರು. ಇದರಿಂದಾಗಿ ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ ಅವಕಾಶಗಳು ವಂಚಿತ ಆಗುತ್ತಿದ್ದವು. ಜೊತೆಗೆ ಅನೇಕ ರೀತಿಯ ಅವಮಾನಗಳನ್ನು ಸಹಿಸಿಕೊಳ್ಳಬೇಕಾಗುತ್ತಿತ್ತು. ಪ್ರತ್ಯೇಕಿಸಿ ನೋಡುವ ಮರಾಠಿಗರ ನೋಟ ಕನ್ನಡಿಗರನ್ನು 'ಕಾನಡೀ ಅಪ್ಪ' ರನ್ನಾಗಿಸಿತ್ತು. ಇಂಥ ಸವಾಲುಗಳನ್ನು ಎದುರಿಸುವ ಅಂದಿನ ಸಂದರ್ಭ ಆಲೂರರಲ್ಲಿ ಕನ್ನಡ — ಕರ್ನಾಟಕದ ಬಗೆಗೆ ಅಭಿಮಾನವನ್ನು ಮೂಡುವಂತೆ ಮಾಡಿತು. ಕನ್ನಡಿಗರ ಸಾಂಸ್ಕೃತಿಕ ಅನನ್ಯತೆಯನ್ನು ಮರಾಠಿಗರಿಗೆ ಮನವರಿಕೆ ಮಾಡಿಕೊಡುವುದು ಆಲೂರರಂಥವರಿಗೆ ಅನಿವಾರ್ಯ ಆಗಿತ್ತು.

ಎರಡನೆಯದಾಗಿ, ಆಲೂರರು ಹಂಪಿ — ಆನೆಗೊಂದಿಗಳ ದರ್ಶನ ಮಾಡಿದ್ದು. 1905ರ ಮೇ 5ರಂದು ಈ ಪ್ರದೇಶಗಳನ್ನು ನೋಡಿದ ಆಲೂರರು —

> "... ನನ್ನ ಮನದಲ್ಲಿ ಕರ್ನಾಟಕತ್ವದ ಭಾವನೆಯು ಒಡಮೂಡಲಿಕ್ಕೆ ಪ್ರಾರಂಭವಾದ ದಿವಸ. ಹಾಗೆಯೇ ಅದು ನನ್ನ ಜೀವನದಲ್ಲಿಯ ತಿರುಗಣಿ ಸ್ಟೇಷನ (Reversing Station)..."

(ನ.ಜೀ.ಸ್ಮೃ. ಪುಟ:79)

ಎಂದು ಹೇಳಿಕೊಂಡಿದ್ದಾರೆ. ಕನ್ನಡಿಗರ ಸಾಂಸ್ಕೃತಿಕ ಸಾಮ್ರಾಜ್ಯದ (ವಿಜಯನಗರ) ವೈಭವೀಕರಣದ ಕಲ್ಪನೆಗಳನ್ನು ಗಾಢವಾಗಿ ತಮ್ಮದನ್ನಾಗಿಸಿಕೊಂಡ ಸಂದರ್ಭ ಆಲೂರರದಾಗಿತ್ತು. ಅನೇಕ ಪೂರ್ವಾಗ್ರಹಗಳು ಅವರ ಕಲ್ಪನೆಗಳ ಹಿಂದೆ ಸ್ಥಾನವನ್ನು ಅಲಂಕರಿಸಿದ್ದು ಈ ಸಂದರ್ಭದಲ್ಲಿಯೇ.

ಮೂರನೆಯದಾಗಿ, 'ವಂಗಭಂಗ' ದ (1905) ಘಟನೆ, ಚಳುವಳಿಗಳ ಪರಿಣಾಮ. ಅಂದು ಬಂಗಾಳವನ್ನು ಎರಡು ಭಾಗಗಳನ್ನಾಗಿಸಿದ್ದುದಕ್ಕೆ ರಾಷ್ಟ್ರೀಯ ಮಟ್ಟದಲ್ಲಿ ಪ್ರತಿಭಟನೆ ಅಭಿವ್ಯಕ್ತಗೊಂಡಿತು. ಆದರೆ ಕನ್ನಡಿಗರು ಇಪ್ಪತ್ತಕ್ಕೂ ಹೆಚ್ಚು ಆಡಳಿತ ವಿಭಾಗಗಳಲ್ಲಿ ಹರಿದು ಹಂಚಿಹೋಗಿದ್ದರೂ ಸಹ ರಾಷ್ಟ್ರೀಯ ಮಟ್ಟದಲ್ಲಿ ಹಾಗಿರಲಿ, ಪ್ರಾಂತೀಯ ಮಟ್ಟದಲ್ಲಿ ಕನ್ನಡಿಗರೇ ಉಸಿರು ಎತ್ತದೆ ಇದ್ದುದು ಆಶ್ಚರ್ಯವೂ, ಅಪಮಾನಕರವಾಗಿಯೂ ಕಂಡಿತು.

ವಂಗ — ಭಂಗದೊಂದಿಗೆ ಕರ್ನಾಟಕ — ಭಂಗವನ್ನು ಹೋಲಿಸಿದ ಆಲೂರರಿಗೆ ಬ್ರಿಟಿಷರ 'ಒಡೆದು ಆಳುವ ನೀತಿ' ಸ್ಪಷ್ಟವಾಗಿ ಗೋಚರಿಸಿತು. ಇದು ಕನ್ನಡಿಗರ ನಿರಭಿಮಾನದ ಬಗೆಗೆ ಆಲೂರರನ್ನು ಅಭ್ಯಾಸ ಮಾಡುವಂತೆ ಮಾಡಿ, 'ಕರ್ನಾಟಕತ್ವ'ದ ಪರಿಕಲ್ಪನೆಯು ಹುಟ್ಟಿಗೆ ಎಡೆಮಾಡಿ ಕೊಟ್ಟಿತು.

ಈ ಮೂರು ಪ್ರಸಂಗಗಳು ಆಲೂರರ ಸಾರ್ವಜನಿಕ ಜೀವನವನ್ನು 'ಕರ್ನಾಟಕತ್ವದ ಜೀವನ'ವನ್ನಾಗಿ ಮಾರ್ಪಡಿಸಿದವು. ಅವರ 'ಕನ್ನಡ — ಕರ್ನಾಟಕತ್ವ'ದ ಹಿನ್ನೆಲೆಯ ಕಾರ್ಯಚಟುವಟಿಕೆಗಳು ಅಂತಿಮವಾಗಿ ಕರ್ನಾಟಕ ಏಕೀಕರಣದ ಸಾಧನೆಯ ಆಶಯಗಳನ್ನೇ ಹೊತ್ತು ಹೊರಟವು. ಕರ್ನಾಟಕದ ಅಥವಾ ರಾಷ್ಟ್ರೀಯ ಮಟ್ಟದಲ್ಲಿನ ಅವರ ಕಾರ್ಯ ಚಟುವಟಿಕೆಗಳು (ಅನುಬಂಧ — 2 ನ್ನು ನೋಡಿ) ರಾಷ್ಟ್ರ ಸ್ವಾತಂತ್ರ್ಯವಾಗುವ ಹಾಗೂ ಕನ್ನಡ ಪ್ರದೇಶಗಳು ಒಂದಾಗುವವರೆವಿಗೂ ಮುಂದುವರೆಯುತ್ತವೆ. ಅನಂತರ ಅವರು 1964ರ ಫೆಬ್ರುವರಿ 24ರಂದು ಮರಣವನ್ನಪ್ಪುವವರೆಗೆ ಆಧ್ಯಾತ್ಮಿಕ ಸಾಹಿತ್ಯ ಚಿಂತನೆಯಲ್ಲಿ ಜೀವನವನ್ನು ಸಾಗಿಸಿದರು. ಇದಿಷ್ಟು ಆಲೂರರ ಜೀವನದ ಕಿರುಪರಿಚಯ ಮತ್ತು ಅವರ ಮೇಲೆ ಆದ ಪ್ರಭಾವ.

: : :

## ಅಧ್ಯಾಯ : 3

## ಆಲೂರರ ಕನ್ನಡ — ಕರ್ನಾಟಕತ್ವದ ಚಿಂತನೆಯ ನಿಲುವುಗಳು

### 3.1 ನಿರ್ವಚನೆ:

ಕನ್ನಡ — ಕನ್ನಡಿಗ — ಕರ್ನಾಟಕ, ಈ ಮೂರು ಪರಿಕಲ್ಪನೆಗಳು ಗಂಡಾಂತರದ ಸ್ಥಿತಿಯಲ್ಲಿ ಇವೆ ಎಂಬ ಆತಂಕ ಈ ಶತಮಾನದ ಆರಂಭದಲ್ಲಿ ಇತ್ತು. ಅಲ್ಲದೆ ಬ್ರಿಟಿಷ ಶಾಹಿಯ ಬಂಧನದಿಂದ ಬಿಡುಗಡೆ ಹೊಂದಲು ತಮ್ಮ ಗತದ ನೆನಪುಗಳನ್ನು ವೈಭವೀಕರಿಸಿ ಬಂಡವಾಳವನ್ನಾಗಿ ಇಟ್ಟುಕೊಂಡ ಚಾರಿತ್ರಿಕ ಸನ್ನಿವೇಶವೂ ಆ ಸಂದರ್ಭದ್ದೇ. ಅಂದಿನ ಹಿಂದೂ ರಾಷ್ಟ್ರೀಯತೆಯ ಅರಿಯಲ್ಲಿ ಸ್ವಾಭಿಮಾನದ, ಕ್ಷಾತ್ರ ತೇಜಸ್ಸಿನ ಮನೋಭಾವನೆಗಳೇ ಪ್ರಬಲ ಅಸ್ತ್ರಗಳು. ಇಂಥ ಹಿನ್ನೆಲೆಗಳಿಂದ ಹುಟ್ಟಿಕೊಂಡದ್ದು ಆಲೂರರ 'ಕನ್ನಡ — ಕರ್ನಾಟಕತ್ವ' ದ ಪರಿಕಲ್ಪನೆ. ಈ ಪರಿಕಲ್ಪನೆಯು ನಿರ್ವಚನೆಗೆ ಒಳಪಡುವುದು ಅತಿ ಅಭಿಮಾನದ ಭಾವುಕತೆಯಲ್ಲಿ. ಅದು ಭಾವುಕರಾಗಿ ಆಲೋಚಿಸಬೇಕಾಗಿದ್ದ ಸಂದರ್ಭವಾಗಿಯೇ ನಿರ್ಮಾಣ ಆಗಿತ್ತು. ಇಂಥ ಭಾವುಕತೆ, ಉದ್ವೇಗಗಳು ಆಲೂರ ವೆಂಕಟರಾಯರನ್ನು ಸಹ ಹೊರತುಪಡಿಸಿರಲಿಲ್ಲ. ಪರಿಣಾಮವಾಗಿ 'ಕರ್ನಾಟಕತ್ವ' ದ ಪರಿಕಲ್ಪನೆಯ ಆಲೋಚನೆಗಳು ಸೃಷ್ಟಿ ಆದವು.

ಅಂದು ಪ್ರಚುರಗೊಂಡ ಭಾಷೆ, ಪ್ರಾಂತಾಭಿಮಾನದ ವಿಚಾರಗಳು ಸಮಕಾಲೀನ ಸ್ಥಿತಿಯ ಎಲ್ಲ ಕುಂದು — ಕೊರತೆಗಳ ಪ್ರತೀಕವಾಗಿ ನಿಲ್ಲುವಂಥದ್ದು. ಅಂದರೆ ವಿಭಜಿತ ಕನ್ನಡ ಪ್ರದೇಶಗಳಲ್ಲಿನ ಭಾಷೆಯ ಬೆಳವಾಗ, ಪತ್ರಿಕೆಗಳ ಅವಶ್ಯಕತೆ, ರಾಷ್ಟ್ರೀಯ ಸಭೆಯ ಕಾರ್ಯ, ಬಂದರಿನ ಅವಶ್ಯಕತೆ, ವಿಶ್ವವಿದ್ಯಾಲಯದ ಸ್ಥಾಪನೆ, ಇತಿಹಾಸ ಸಂಶೋಧನೆಯ ಜರೂರು, ಬ್ರಾಹ್ಮಣ — ಬ್ರಾಹ್ಮಣೇತರರ ನಡುವಿನ ಸಾಮರಸ್ಯ, ವ್ಯಾಪಾರ, ವಾಣಿಜ್ಯ, ಶಿಕ್ಷಣ ಮೊದಲಾದವುಗಳ ಅವಶ್ಯಕತೆ ಹಾಗೂ ಕ್ರಿಯಾಶೀಲತೆ ಮೊದಲಾದ ಎಲ್ಲ ವಿಭಿನ್ನ ಆಯಾಮಗಳಿಂದ ಯೋಚಿಸುವಂತೆ ಮಾಡಿತು.

ಆದ್ದರಿಂದಲೇ ಆಲೂರರು 'ಕರ್ನಾಟಕತ್ವ' ಎಂದರೇನು ಎಂಬ ಪ್ರಶ್ನೆಗೆ —

> " ಕರ್ನಾಟಕತ್ವವೆಂಬುದು ನನ್ನ ವಿಶಿಷ್ಟ ವಿಚಾರ. ಆ ಶಬ್ದವೂ ಕೂಡ ನನ್ನ ಟಂಕಸಾಲೆಯಲ್ಲಿ ಹುಟ್ಟಿದ್ದು. ಆದೊಂದು ಶಬ್ದದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಯಾವತ್ತೂ ವಿಷಯಗಳು ಸೇರ್ಪಡೆಯಾಗುತ್ತವೆ. ಆದರಲ್ಲಿ ಸೇರದ ವಿಷಯವಿಲ್ಲ. ನನ್ನ ಜೀವನದ ಯಾವತ್ತೂ ಚಟುವಟಿಕೆಗಳ ಅದೃಶ್ಯವಾದ ಉಗಮವು ಈ ಕರ್ನಾಟಕತ್ವದ ಕಲ್ಪನೆಯಲ್ಲಿ"
>
> (ಕ.ವಿ., ಪುಟ:9)

ಎಂದು ಉತ್ತರಿಸಿ, ನಿರ್ವಚಿಸುತ್ತಾರೆ. ಆಲೂರರಿಗೆ 'ಕನ್ನಡ — ಕರ್ನಾಟಕತ್ವ' ಎಂಬುದು ಭಾಷೆ, ಜನ, ಪ್ರದೇಶ, ಸಾಂಸ್ಕೃತಿಕ ಹಿನ್ನೆಲೆ ಮೊದಲಾದ್ದುಗಳನ್ನು ಒಳಗೊಂಡದ್ದು.

ಅಭಿಮಾನವನ್ನು ಮೂಡಿಸುವ ಈ ಪರಿಕಲ್ಪನೆಯಿಂದಲೇ ಎಲ್ಲ ಕುಂದುಕೊರತೆಗಳನ್ನು ಅರಿತು ಪರಿಹಾರಕ್ಕಾಗಿ ಮಾರ್ಗ — ಯೋಜನೆಗಳು ರೂಪುಗೊಂಡವು. ಕರ್ನಾಟಕತ್ವದಲ್ಲೂ ಆಲೂರರು 'ಸಾತ್ವಿಕ ಅಹಂಕಾರ' ವನ್ನು ಕಾಣುತ್ತಾರೆ. ಅವರಿಗೆ ಇದು ಪರಿಶುದ್ಧ ಭಾವನೆಯನ್ನೊಳಗೊಂಡ ಪರಿಕಲ್ಪನೆ. ಕನ್ನಡಿಗರ, ಕರ್ನಾಟಕದ ಹಿತವು ಈ ಭಾವನೆಯಲ್ಲಿ ಅಡಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ಆಲೋಚನೆಗಳು ಕರ್ನಾಟಕದ ಹಿತದ ಮೂಲಕ ಭಾರತದ ಸ್ವಾತಂತ್ರ್ಯ ಮತ್ತು ಪ್ರಗತಿಯ ಆಶಯವನ್ನು ಒಳಗೊಂಡಂಥವು. ಅಂದರೆ ಅವರ ಚಿಂತನೆಯಲ್ಲಿ 'ಅಂತರ್ರಾಷ್ಟ್ರೀಯತ್ವ' ದ ತತ್ತ್ವ ಅಡಗಿದೆ. ಆ ಮೂಲಕವೇ ಅವರು ಕರ್ನಾಟಕ, ಭಾರತ, ವಿಶ್ವಗಳನ್ನೊಳಗೊಂಡ ವ್ಯಾಪಕ ನೋಟವನ್ನು ಹರಿಸುತ್ತಾರೆ. ಅವರ ಒಟ್ಟು 'ಕರ್ನಾಟಕತ್ವ' ದ ಚಿಂತನೆ ಆಧ್ಯಾತ್ಮಿಕ ಚಿಂತನೆಯ ಪ್ರತಿರೂಪವೂ ಹೌದು. ಪ್ರಜ್ಞಾಪೂರ್ವಕವಾಗಿ ಅದು ಅವರನ್ನು ಬಹಳ ತೀವ್ರವಾಗಿ ಆವರಿಸಿರುವುದು ತಿಳಿದುಬರುತ್ತದೆ.

ಆಲೂರರು ತಮ್ಮ 'ಕನ್ನಡ — ಕರ್ನಾಟಕತ್ವ' ದ ಚಿಂತನೆಯಲ್ಲಿ ಕರ್ನಾಟಕದ ಸಾಂಸ್ಕೃತಿಕ ಏಕೀಕರಣವನ್ನು ಕಾಣಲು ಬಯಸುತ್ತಾರೆ. ಅನಂತರವೇ ರಾಜಕೀಯ ಏಕೀಕರಣ ಸಾಧ್ಯ ಆಗುವುದು ಎಂದು ತಿಳಿದಿದ್ದ ಅವರು ಮೊದಲು ಕನ್ನಡಿಗರನ್ನು ಸಾಂಸ್ಕೃತಿಕವಾಗಿ ಒಂದು ಮಾಡಲು ಪ್ರಯತ್ನಿಸುತ್ತಾರೆ. ಅದು ಕರ್ನಾಟಕದ ಬಗ್ಗೆ ಇದ್ದಂಥ ಅಮೂರ್ತ

ಸ್ವರೂಪವನ್ನು ಹೋಗಲಾಡಿಸುವ ಪ್ರಯತ್ನವೂ ಹೌದು. ಆದ್ದರಿಂದಲೇ ಅವರು ಕನ್ನಡಿಗರು ತಮ್ಮನ್ನು ಗುರುತಿಸಿಕೊಳ್ಳಲು, ಹೆಮ್ಮೆಪಟ್ಟುಕೊಳ್ಳಲು ಇರುವ ಎಲ್ಲ ಅಂಶಗಳನ್ನು ಕರೆ ಹಾಕುವುದು. ಕರೆಹಾಕಿದ ಅಂಶಗಳನ್ನು 'ಕರ್ನಾಟಕತ್ವ'ದ ಚೌಕಟ್ಟಿನಲ್ಲಿ ಜೋಡಿಸಿ ಸಮಕಾಲೀನ ಸ್ಥಿತಿಯ ಬಗ್ಗೆ ಎಚ್ಚರಿಸುತ್ತಾರೆ. ಹಾಗೆಯೇ ಅಭಿಮಾನವನ್ನು ಹೊಂದುವಂತೆ ಪ್ರೇರೇಪಿಸುವುದು ಅವರ ಮುಖ್ಯ ನಿಲುವು. ಬಹುಶಃ ಅದಕ್ಕಾಗಿಯೇ ಅವರು ತಮ್ಮ ಭಾಷೆ, ಪ್ರದೇಶ, ಸಂಸ್ಕೃತಿಗಳ ಬಗ್ಗೆ ಇಂತಿಷ್ಟೇ ಅಭಿಮಾನ ಪಡುವ ವಿಷಯಗಳು ಎಂದು ಸೀಮಿತಗೊಳಿಸುವುದಿಲ್ಲ. ಈ ಹಿನ್ನೆಲೆಯಲ್ಲಿಯೇ ಅವರು —

> " ಕರ್ನಾಟಕತ್ವವೆಂದರೆ ಕೇವಲ ದೇಶಾಭಿಮಾನವಲ್ಲ. ಕೇವಲ ಭಾಷಾಭಿಮಾನವಲ್ಲ. ಕೇವಲ ಇತಿಹಾಸಾಭಿಮಾನವಲ್ಲ. ಇವೆಲ್ಲವುಗಳನ್ನು ಮೀರಿದ, ಇವೆಲ್ಲವುಗಳನ್ನು ಒಳಗೊಂಡ ಪರಿಶುದ್ಧ ಭಾವನೆ "
>
> (ಕ.ಸೂ., ಪುಟ:9)

ಎಂಬುದಾಗಿ ಅರ್ಥೈಸಿರುವುದು. ಒಟ್ಟಾರೆ ಸ್ವ — ಅಭಿಮಾನ ಮಾಡಬೇಕು ಎಂಬುದು ಅವರ ತತ್ವ. ಕನ್ನಡಿಗರು ಅಭಿಮಾನಪಟ್ಟುಕೊಳ್ಳುವ ಪ್ರವೃತ್ತಿಯನ್ನು ಮೈಗೂಡಿಸಿಕೊಳ್ಳದ ಹೊರತು ಅವರ ಆಶಯಗಳನ್ನು ಈಡೇರಿಸಿಕೊಳ್ಳಲು ಸಾಧ್ಯವೇ ಇಲ್ಲ ಎಂದು ಚೆನ್ನಾಗಿ ಅರಿತಿದ್ದರು.

ಆಲೂರ ವೆಂಕಟರಾಯರ ಎಲ್ಲ ವಿಚಾರಧಾರೆ, ಕಾರ್ಯ ಚಟುವಟಿಕೆಗಳು ಕರ್ನಾಟಕದ ದೃಷ್ಟಿಯನ್ನು ಇಟ್ಟುಕೊಂಡು ಅಭಿವ್ಯಕ್ತಗೊಳ್ಳುವಂಥವು. ಅಲ್ಲದೆ ಕನ್ನಡ ಭಾಷೆಯ, ಕನ್ನಡ ಜನತೆಯ ಶ್ರೇಯೋಭಿವೃದ್ಧಿಗೆ ದತ್ತವಾಗುವ ಎಲ್ಲ ಅವಕಾಶಗಳನ್ನು ಬಳಸಿಕೊಳ್ಳುವಂಥವು. ಅವರು ತಮ್ಮ ಕರ್ನಾಟಕತ್ವದ ಚಿಂತನೆಯನ್ನು ಎಷ್ಟು ತೀವ್ರವನ್ನಾಗಿಸಿದ್ದರು ಅಂದರೆ ಜೀವನ, ಕರ್ನಾಟಕ ಎರಡೂ ಒಂದೇ ಎನ್ನುವ ರೀತಿಯಲ್ಲಿ. ಕನ್ನಡಿಗರಲ್ಲಿ ವ್ಯಕ್ತಿಗತಗೊಳ್ಳುವಂತೆ ಜಾಗೃತಿ ಮೂಡಿಸುತ್ತಿದ್ದ ಅವರ ಚಿಂತನೆಯ ಅಂತಿಮ ಗುರಿ ಕರ್ನಾಟಕದ ಏಕೀಕರಣವೇ ಆಗಿತ್ತು. ಆ ಮೂಲಕ ಭಾರತದ ಸ್ವಾತಂತ್ರ್ಯವೂ ಸಾಧ್ಯ ಎಂಬುದು ಅವರ ಅಭಿಪ್ರಾಯ.

ಆಲೂರರ ಭಾಷೆ ಮತ್ತು ಪ್ರಾಂತೀಯತೆಗಳ ಚಿಂತನೆಗೆ ಬಂಗಾಳದ ವಿಭಜನೆ, ಚಳುವಳಿಗಳು ಹೆಚ್ಚು ಪ್ರಭಾವ ಬೀರಿದ್ದವು. ಅಂಥ ಒಂದು ಪರಿಸರವನ್ನೇ ತಮ್ಮ 'ಕನ್ನಡ-ಕರ್ನಾಟಕತ್ವ'ದ

ಚಿಂತನೆಯ ಮೂಲಕ ಸೃಷ್ಟಿ ಮಾಡಲು ಯೋಚಿಸಿದ್ದರು ಅನ್ನಿಸುತ್ತದೆ. ಕನ್ನಡ ಭಾಷೆ ಮತ್ತು ಪ್ರದೇಶದ ಬಗ್ಗೆ ಪ್ರತಿಯೊಬ್ಬ ಕನ್ನಡಿಗನು ಭಾವುಕನಾಗಿ ಅಭಿಮಾನಪಟ್ಟುಕೊಳ್ಳುವಂತೆ ಮಾಡುವುದು ಅವರ ಚಿಂತನೆಯಲ್ಲಿನ ಒಟ್ಟು ತಿರುಳು. ಅವರು ಮೊದಲು ಮೈಗೂಡಿಸಿಕೊಂಡ ಈ ರೀತಿಯ ಭಾವುಕತೆಯನ್ನು ಇತರರಲ್ಲೂ ತುಂಬುವುದು ಸ್ಪಷ್ಟ ಆಗುತ್ತದೆ. ಈ ಹಿನ್ನೆಲೆಯಲ್ಲಿಯೇ ಕೀರ್ತಿನಾಥ ಕುರ್ತಕೋಟಿ ಅವರು —

> “ ಆಲೂರರವರ ಜೀವನದಲ್ಲಿ ‘ಕರ್ನಾಟಕತ್ವ’ ವನ್ನು ನೋಡಬೇಕು, ‘ಕರ್ನಾಟಕತ್ವ’ ದಲ್ಲಿ ಆಲೂರರವರನ್ನು ನೋಡಬೇಕು ಎನ್ನುವ ಮಟ್ಟಿಗೆ ಅವೆರಡೂ ಅಭಿನ್ನವಾದುವುಗಳಾಗಿವೆ. ”
>
> (ನ.ಜೀ.ಸ್ಮೃ., ಪುಟ: 15)

ಎಂದಿದ್ದಾರೆ. ಅಂದರೆ ಆಲೂರರಿಂದ ಬೇರ್ಪಡಿಸಲಾಗದ ‘ಕರ್ನಾಟಕತ್ವ’ ದ ಚಿಂತನೆಯನ್ನು ನೋಡಬಹುದು. ಕರ್ನಾಟಕವು ‘ಮೃತ ರಾಷ್ಟ್ರವಲ್ಲ’ ಅದೊಂದು ‘ಜೀವಂತ ರಾಷ್ಟ್ರ’ ಎಂಬ ಪ್ರಜ್ಞೆಯನ್ನು ಮೂಡಿಸುವುದು ಆಲೂರರಿಗೆ ಜರೂರಿನ ವಿಷಯ ಆಗಿತ್ತು. ಆ ಮೂಲಕವೇ ಅವರು ಅಖಂಡ ಕರ್ನಾಟಕ, ಸ್ವತಂತ್ರ ಭಾರತದ ಆಶಯಗಳನ್ನು ಪೂರೈಸಿಕೊಂಡದ್ದು.

## 3.2 ರಾಷ್ಟ್ರೀಯತ್ವ ಹಾಗೂ ಕರ್ನಾಟಕತ್ವಗಳ ಚಿಂತನೆ

ಭಾರತದ ಸ್ವಾತಂತ್ರ್ಯ ಹೋರಾಟ ಹಾಗೂ ಛಿದ್ರವಾಗಿದ್ದ ಕರ್ನಾಟಕವನ್ನು ಒಂದುಗೂಡಿಸುವ ಕಾರ್ಯ — ಇವುಗಳಲ್ಲಿ ಆಲೂರರು ಆರಿಸಿಕೊಂಡದ್ದು ಎರಡನೆಯದನ್ನು. ಅಂದು ಎಲ್ಲರೂ ರಾಷ್ಟ್ರೀಯ ಮಟ್ಟದಲ್ಲೇ ಕೆಲಸ ಮಾಡಲು ಯೋಚಿಸುತ್ತಿದ್ದರು. ಪ್ರಾಂತೀಯ ಮಟ್ಟದ ರಾಜಕಾರಣವನ್ನು ಅಷ್ಟಾಗಿ ಪರಿಗಣನೆಗೆ ತೆಗೆದುಕೊಂಡಿರಲಿಲ್ಲ. ಇದಕ್ಕೆ ಅಂದಿನ ರಾಷ್ಟ್ರೀಯ ಹೋರಾಟದ ಸ್ಥಿತಿಗತಿಗಳು ಕಾರಣ. ಅಲ್ಲದೆ ರಾಷ್ಟ್ರೀಯ ಕಾರ್ಯಕ್ಷೇತ್ರದಲ್ಲಿ ಬಹು ಬೇಗ ದೊರೆಯುತ್ತಿದ್ದ ಕೀರ್ತಿ — ಪ್ರತಿಷ್ಠೆಗಳೂ ಕಾರಣ ಆಗಿರಬಹುದು. ಅಂದು ಕರ್ನಾಟಕದ ಬಗ್ಗೆ ಅಭಿಮಾನವನ್ನು ಮೂಡಿಸುವ ಕಾರ್ಯ ನಮ್ಮದಲ್ಲ ಎಂದು ತಿಳಿದಿದ್ದವರೇ ಹೆಚ್ಚು.

ಇಂಥ ಸಂದರ್ಭದಲ್ಲಿ ಆಲೂರರಂಥ ಕೆಲವೇ ಮಂದಿ ಅದನ್ನು ಕನ್ನಡಿಗರ ಆದ್ಯ ಕರ್ತವ್ಯ ಎಂದು ಸ್ವೀಕರಿಸಿದರು. ಪ್ರಾಂತೀಯ ನೆಲೆಯಲ್ಲಿಯೇ ನಿಂತು ರಾಷ್ಟ್ರಕ್ಕಾಗಿ ಹೇಗೆ ಕೆಲಸ ಮಾಡಬಹುದು ಎಂಬುದನ್ನು ಆಲೂರರು ಪ್ರಪ್ರಥಮ ಬಾರಿಗೆ ತೋರಿಸಿಕೊಟ್ಟರು.

ಆಲೂರರ ಕಲ್ಪನೆಯ ರಾಷ್ಟ್ರೀಯತ್ವ, ಕರ್ನಾಟಕತ್ವಗಳು ಪರಸ್ಪರ ವಿರುದ್ಧ ಆಗಿರಲಿಲ್ಲ. ಅವು ಪೂರಕ ಆಗಿದ್ದವು. ಆದ್ದರಿಂದಲೇ ಅವರು —

> " ರಾಷ್ಟ್ರೀಯತ್ವಕ್ಕೂ, ಕರ್ನಾಟಕಕ್ಕೂ ನನಗೆ ವಿಶೇಷ ಭೇದವೇ ತೋರುವುದಿಲ್ಲ. ಕರ್ನಾಟಕತ್ವವನ್ನೇ ಕಾರ್ಯಕ್ಷೇತ್ರವನ್ನಾಗಿ ತಕೊಂಡು, ರಾಷ್ಟ್ರೀಯತ್ವದಲ್ಲಿ ಕೆಲಸ ಮಾಡುವೆನು. ಇದಕ್ಕೆ ಪ್ರಾದೇಶಿಕ ರಾಷ್ಟ್ರೀಯತ್ವವೆಂದು ಕರೆಯಬಹುದು. "
>
> (ಕ.ವಿ., ಪುಟ: 76)

ಎಂಬುದಾಗಿ ಸಮರ್ಥಿಸಿಕೊಂಡು ಪ್ರಾದೇಶಿಕ ರಾಷ್ಟ್ರೀಯತ್ವಕ್ಕೆ ಒತ್ತು ನೀಡುತ್ತಾರೆ. ಅಂದರೆ, ಕರ್ನಾಟಕದ ಜನತೆ ತಮ್ಮ ನಡೆ — ನುಡಿ, ಆಚಾರ — ವಿಚಾರ, ಸಾಹಿತ್ಯ, ಚರಿತ್ರೆ, ಸಂಸ್ಕೃತಿಗಳ ಬಗ್ಗೆ ಸೂಕ್ತವಾದ ಅಭಿಮಾನವನ್ನು ತೋರ್ಪಡಿಸಬೇಕು. ಇಲ್ಲದೆ ಹೋದಲ್ಲಿ ಅವರು ನೈಜ ರಾಷ್ಟ್ರೀಯ ಸ್ವರಾಜ್ಯವನ್ನು ಅನುಭವಿಸಲು ಅಸಾಧ್ಯ ಎಂದು ಆಲೋಚಿಸಿದ್ದಾರೆ. (ಜ.ಕ; ಸಂ.2 ಸಂ:6; ಪುಟ: 479). ಆದ್ದರಿಂದಲೇ ಆಲೂರರು ರಾಷ್ಟ್ರೀಯ ಮಟ್ಟದ ಹೋಂರೂಲ್ (1914–18), ಅಸಹಕಾರ (1921) ಮೊದಲಾದ ಚಳುವಳಿಗಳನ್ನು ಪ್ರಾಂತೀಯ ಮಟ್ಟಕ್ಕೆ (ಕರ್ನಾಟಕಕ್ಕೆ) ಸೀಮಿತಗೊಳಿಸುವುದು. ಅಂದರೆ ಅವರು 'ಕರ್ನಾಟಕ ಪ್ರಾಂತೀಯ ಹೋಂರೂಲ್ ಚಳುವಳಿ', 'ಕರ್ನಾಟಕ ಪ್ರಾಂತೀಯ ಅಸಹಕಾರ ಚಳುವಳಿ' ಎಂಬುದಾಗಿ ಕರೆಯುವಂತೆ ಪಟ್ಟುಹಿಡಿದು ಕರ್ನಾಟಕತ್ವವನ್ನು ಅಭಿವ್ಯಕ್ತಿಸಿದರು. ಇಂಥ ಜನತಾ ಪ್ರಧಾನ ಚಳುವಳಿಗಳ ಪ್ರಚಾರವು ಪ್ರಾಂತೀಯ ಭಾಷೆಯಲ್ಲಿ (ಕನ್ನಡದಲ್ಲಿ) ಇರಬೇಕು ಎಂಬುದು ಅವರ ನಿಲುವು. ಅವರ ಈ ನಿಲುವೇ ಕನ್ನಡ — ಕರ್ನಾಟಕತ್ವಗಳ ಅಭಿಮಾನವನ್ನು ಕಡಿಮೆ ಸಮಯದಲ್ಲಿ ಹೆಚ್ಚು ಜನರಿಗೆ ತಲುಪುವಂತೆ ಮಾಡಿದ್ದು.

ಆಲೂರರ ಚಿಂತನೆಯಲ್ಲಿ ಕರ್ನಾಟಕತ್ವದ ಮೂಲಕವೇ 'ಭಾರತೀಯತ್ವ' ವನ್ನು ತಲುಪಲು ಸಾಧ್ಯ ಎಂಬುದು ವ್ಯಕ್ತ ಆಗುತ್ತದೆ. ಅದು ಪ್ರಾದೇಶಿಕವಾಗಿಯೇ ಕಂಡರೂ

ಸಂಕುಚಿತ ಅನ್ನಿಸುವುದಿಲ್ಲ. ~~ಆದ್ದರಿಂದಲೇ ಅವರು ಭಾರತವನ್ನೇ ಏಕೆ ವಿಶ್ವವನ್ನೇ ಕಾಣಲು~~ ಆದ್ದರಿಂದಲೇ ಅವರು ಭಾರತವನ್ನೇ ಏಕೆ ವಿಶ್ವವನ್ನೇ ಕಾಣಲು ಸಾಧ್ಯ ಎನ್ನುವ ವಿಶಾಲ ಅರ್ಥದಲ್ಲಿ —

> " ಕರ್ನಾಟಕತ್ವವೆಂದರೆ ಕಿರಣಕೇಂದ್ರದ ಕಾಜು. (Focussing lense ) ಅದರೊಳಗಿಂದ ನನಗೆ ಭರತಭೂಮಿಯೇ ಏಕೆ? ಇಡೀ ವಿಶ್ವವೇ ಕಾಣುತ್ತದೆ... "
>
> (ಕ.ವಿ., ಪುಟ: 47)

ನಿರ್ವಚಿಸಿದ್ದಾರೆ. ಅವರು ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ರಾಷ್ಟ್ರೀಯತತ್ವಗಳನ್ನು ಒಂದೇ ದೃಷ್ಟಿಯಲ್ಲೇ ಇಟ್ಟು ನೋಡುತ್ತಾರೆ. ಆಮೂಲಕ ಜನತೆಯಲ್ಲಿ ವಿಭಿನ್ನತೆಯನ್ನು ಉಂಟುಮಾಡದೆ ಒಂದೇ ಪರಕೀಯ ಆಡಳಿತವನ್ನು ಎತ್ತಿ ತೋರಿಸುವುದು ಅವರ ಚಿಂತನೆಗಳ ಹಿಂದಿನ ಆಶಯ ಆಗಿದೆ. ಅವರು ಆರಂಭಿಸುವುದು ಕರ್ನಾಟಕದಿಂದಲೇ. ಆದರೆ ಮುಕ್ತಾಯ ಆಗುವುದು ಮಾತ್ರ ಭಾರತದ ಮಟ್ಟದಲ್ಲಿ. ಸ್ವಾತಂತ್ರ್ಯ ಸಾಧನೆ ಹಾಗೂ ಕರ್ನಾಟಕದ ಏಕೀಕರಣಗಳೆರಡಕ್ಕೂ ಪ್ರಾದೇಶಿಕ ರಾಷ್ಟ್ರೀಯತತ್ವವನ್ನ ಹಾದಿಯನ್ನಾಗಿಸಿಕೊಂಡರು. ಅವರ ಕಲ್ಪನೆಯ ಕರ್ನಾಟಕ ಸರ್ವತಂತ್ರ, ಸ್ವತಂತ್ರ, ಸಾರ್ವಭೌಮ ಅಧಿಕಾರದ (ಒಂದು ರೀತಿಯಲ್ಲಿ ಫೆಡರಲ್ ಮಾದರಿಯದು) ಕಡೆಗೆ ಹೆಜ್ಜೆ ಹಾಕುವ ಆಶಯವನ್ನು ಒಳಗೊಂಡದ್ದು. ಅದಕ್ಕಾಗಿ ಅವರು ಹಲವು ಸಂಘ — ಸಂಸ್ಥೆಗಳನ್ನು, ಚಳುವಳಿಗಳನ್ನು (ನೋಡಿ: ಅನುಬಂಧ — 2) ಹುಟ್ಟುಹಾಕುತ್ತಾರೆ.

ಆಲೂರರ ಚಿಂತನೆಯಲ್ಲಿ ರಾಷ್ಟ್ರೀಯತ್ವಕ್ಕೆ ವಿರುದ್ಧವಾಗುವುದು ಕರ್ನಾಟಕತ್ವ ಅನ್ನಿಸುವುದಿಲ್ಲ. ಹಾಗೆಯೇ ಕರ್ನಾಟಕತ್ವಕ್ಕೆ ವಿರುದ್ಧವಾಗುವುದು ರಾಷ್ಟ್ರೀಯತ್ವ ಅನ್ನಿಸದು. ಅವರು ಈ ರೀತಿಯ ಸೂತ್ರದಿಂದ 'ಸ್ವಾತಂತ್ರ್ಯ ಹೋರಾಟದ ಯಾವ ಪ್ರಶ್ನೆಯನ್ನೂ ಕರ್ನಾಟಕತ್ವವು ಗೌಣವನ್ನಾಗಿಸುವುದಿಲ್ಲ' ಎಂಬುದನ್ನು ಸ್ಪಷ್ಟಪಡಿಸಬೇಕಿತ್ತು. ಏಕೆಂದರೆ ಅಂದು ಬ್ರಿಟಿಷರು ತಮ್ಮ ಕುಟಿಲ ನೀತಿಯನ್ನು ಬಳಸಿ ಸ್ವಾತಂತ್ರ್ಯ ಹೋರಾಟದಿಂದ ಕೆಲವರನ್ನು ಹಿಂಜರಿಯುವಂತೆ ಮಾಡಿದ್ದರು. (ಕ.ವಿ., ಪುಟ 12). ಅಂದಿನ ಸ್ಥಿತಿಯಲ್ಲಿ ಸ್ವಾತಂತ್ರ್ಯ ಹೋರಾಟವೇ ಕೆಲವರಿಗೆ ಮುಖ್ಯ ಅನ್ನಿಸಿತ್ತು. ಆದರೆ ಮತ್ತೆ ಕೆಲವರಿಗೆ ಅಖಂಡ ಕರ್ನಾಟಕವೇ

ಮುಖ್ಯ ಅನ್ನಿಸಿತ್ತು. ಆಲೂರರಂಥವರಿಗೆ ಆವೆರಡೂ ಒಂದೇ. ಅಲ್ಲದೆ ಕಡಪಾ ರಾಘವೇಂದ್ರ ರಾವ್ ಅಂಥವರು ಎರಡೂ ಕ್ಷೇತ್ರಗಳಲ್ಲಿ ಸರಿಸಮನಾಗಿ ಕಾರ್ಯ ನಿರ್ವಹಿಸಿದರು. ಕಾಂಗ್ರೆಸ್ ಧುರೀಣರಾಗಿದ್ದ ದಿವಾಕರರದು 'ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕ' ಎಂಬ ನಿಲುವು. ಒಟ್ಟಿನಲ್ಲಿ ಆಲೂರರು ಇವೆರಡನ್ನೂ 'ಯಾವುದೂ ಹೆಚ್ಚೂ ಅಲ್ಲ; ಕಡಿಮೆಯೂ ಅಲ್ಲ, ಸರಿಸಮಾನವಾದುವು' ಎಂಬಂತೆ ಚಿಂತಿಸುತ್ತಾರೆ. ಹಾಗೆಯೇ ಯಾವುದು ಮೊದಲು, ಯಾವುದು ಅನಂತರ ಎಂಬ ವಿಷಯವನ್ನೂ ಸಹ.

ಪಾಶ್ಚಾತ್ಯ ವಿಚಾರಗಳಿಂದ ದತ್ತವಾದ ರಾಷ್ಟ್ರೀಯತೆಯ ಪರಿಕಲ್ಪನೆಗೆ ಆಲೂರರು ತಮ್ಮದೇ ಆದಂಥ ಆಲೋಚನೆಗಳನ್ನು ಬೆರೆಸುತ್ತಾರೆ. ಆಮೂಲಕ 'ಕನ್ನಡ ರಾಷ್ಟ್ರೀಯತೆ' ಎಂಬುದು 'ಸಾಮ್ರಾಜ್ಯ' ದ ಪರಿಧಿಯನ್ನು ನಿರ್ಮಾಣ ಮಾಡಿಕೊಳ್ಳುತ್ತದೆ. ಇಲ್ಲಿ ಕರ್ನಾಟಕತ್ವವು ತನ್ನ ಉಪಸ್ಥಿತಿಯನ್ನು ಅಭಿವ್ಯಕ್ತಿಸಿದರೂ ಸಹ ರಾಷ್ಟ್ರೀಯತೆಯ ವಿರುದ್ಧವಾಗಿ ಕವಲುದಾರಿಯನ್ನು ನಿರ್ಮಿಸಿಕೊಂಡಿದ್ದಲ್ಲ. ಮೂಲ ರಾಷ್ಟ್ರ ಕಲ್ಪನೆಯೊಂದಿಗೆ ಸರಿಸಮಾನವಾಗಿ ತನ್ನ ಸ್ವರೂಪವನ್ನೂ ಗುರುತಿಸಿಕೊಳ್ಳುವಂಥದು. ಆಲೂರರ 'ಸಾತ್ವಿಕ ಅಹಂಕಾರ' ದ ರಾಷ್ಟ್ರೀಯತೆಯಂತೆಯೇ ಕನ್ನಡ — ಕರ್ನಾಟಕತ್ವಗಳನ್ನು ಒಳಗೊಂಡ 'ಉಪ' ರಾಷ್ಟ್ರೀಯತೆಯನ್ನೂ ಸಹ ನೋಡಬೇಕಾಗಿದೆ. ಏಕೆಂದರೆ ಅವು ರಾಷ್ಟ್ರೀಯತೆ — ಕರ್ನಾಟಕತ್ವಗಳ ಚಿಂತನೆ ಪ್ರಮುಖ ವಾಹಿನಿಯೊಂದರ ಜೊತೆಜೊತೆಗೆ ಸಾಗುವ ಇನ್ನುಳಿದ ತೊರೆಗಳ ರೀತಿಯದು. ಈ ಹಿನ್ನೆಲೆಯಲ್ಲಿಯೇ ಸ್ವಾತಂತ್ರ್ಯ ಹೋರಾಟ ಹಾಗೂ ಕರ್ನಾಟಕದ ಏಕೀಕರಣ ಚಳುವಳಿಗಳು ಒಂದೇ ಕಾಲಘಟ್ಟದಲ್ಲಿ ಕಾಣಿಸಿಕೊಳ್ಳುವುದು.

## 3.3 ಭಾರತ ಮತ್ತು ಕರ್ನಾಟಕ ಸಂಸ್ಕೃತಿಗಳ ಚಿಂತನೆ:

'ಸಂಸ್ಕೃತಿ' ಎಂಬುದು ಬಹಳ ಸಂಕೀರ್ಣವಾದ ಪರಿಕಲ್ಪನೆ. ಆದರೆ ಆಲೂರರ ಕಾಲಕ್ಕೆ ಈ ಕಲ್ಪನೆ ಅಷ್ಟು ಸಂಕೀರ್ಣ ಏನಲ್ಲ. ಏಕೆಂದರೆ ಅಂದು ಇಡೀ ಭಾರತೀಯ ಸಂಸ್ಕೃತಿಯೇ ಬ್ರಾಹ್ಮಣೀಕರಣಗೊಂಡಿದ್ದ ಕಾಲ ಆಗಿತ್ತು. 'ಅನೇಕತ್ವದ' ಸತ್ಯಗಳು ಬೇರು ಬಿಟ್ಟದ್ದ ಕಾಲವೂ ಹೌದು. (ಬ. ಕಲ್ಗುಡಿ, ಸಿರಿಗನ್ನಡ, ಪುಟ: 168 ಆಅ). ಹಿಂದು ರಾಷ್ಟ್ರೀಯವಾದದ ನೆರೆಗಳನ್ನು ಗುರುತಿಸಿಕೊಂಡಿದ್ದ ಭಾರತೀಯ (ವೈದಿಕ) ಸಂಸ್ಕೃತಿಯು ಜನ ಸಮುದಾಯ

ಸಂಸ್ಕೃತಿಯ ಕಡೆಗೆ ಗಮನ ಹರಿಸುವಲ್ಲಿ ವಿಫಲ ಗೊಂಡಿತು. ಇದು ಆಲೂರರ ಕರ್ನಾಟಕ ಸಂಸ್ಕೃತಿಯ ಚಿಂತನೆಗೂ ಅನ್ವಯ ಆಗುತ್ತದೆ. ಇವರ ಕರ್ನಾಟಕ ಸಂಸ್ಕೃತಿ ಚಿಂತನೆ ಹಿಂದುತ್ವ, ವೀರತ್ವ, ವೈಭವತೆ, ಸಾಮ್ರಾಜ್ಯವಾದ, ಬಲಿಷ್ಠ ಪ್ರಭುತ್ವ — ಇಂಥ ಎಲ್ಲೆಗಳನ್ನು ಕಟ್ಟಿಕೊಳ್ಳುವಂಥದ್ದು. ಅದರಾಚೆಗೆ ಚಿಂತನೆ ಮಾಡುವುದಾಗಿರಲಿಲ್ಲ. " ಸ್ವತಂತ್ರ ವಿಚಾರವೇ ನನ್ನ ಸಾಂಸ್ಕೃತಿಕ ಜೀವನದ ವೈಶಿಷ್ಟ್ಯ " (ನ.ಜೀ.ಸ್ಮೃ; ಪುಟ: 177) ಎನ್ನುವ ಆಲೂರರು ಕೆಲವೆಡೆ ವಿರೋಧಾಭಾಸಕ್ಕೂ ಎಡೆಮಾಡಿಕೊಡುತ್ತಾರೆ. ಅಂದರೆ ಒಂದು ಕಡೆಗೆ ಸ್ವತಂತ್ರ ವಿಚಾರಗಳನ್ನು ಆಹ್ವಾನಿಸಿದರೂ ಇನ್ನೊಂದು ಕಡೆಗೆ ಸನಾತನ ಧರ್ಮದ ಸಂಸ್ಕೃತಿಗೆ ಒಳಪಟ್ಟು ಅದನ್ನೇ ವಿಶ್ವಧರ್ಮವನ್ನಾಗಿಸುವುದು ವ್ಯಕ್ತವಾಗುತ್ತದೆ. ಹೀಗೆ ಹೇಳುವಾಗ ಧರ್ಮ ಮತ್ತು ಸಂಸ್ಕೃತಿಗಳನ್ನು ಬಹಳ ನಿಕಟವಾಗಿ ಗಂಟುಹಾಕುತ್ತಾರೆ. ಉಳಿದವು ಅವರಿಗೆ ಗೌಣ. ಆದ್ದರಿಂದಲೇ ಅವರ ಚಿಂತನೆಯಲ್ಲಿ ಕ್ರಿಶ್ಚಿಯನ್, ಇಸ್ಲಾಂ ಮೊದಲಾದ ಧರ್ಮಗಳು ಅಪೂರ್ಣ ಎನಿಸುವುದು. ಅಲ್ಲದೆ ಹಿಂದೂ ಧರ್ಮವೇ ಪೂರ್ಣತ್ವದ್ದು ಎಂಬ ನಿಲುವು ತಳೆದಿರುವುದು ಸ್ಪಷ್ಟ ಆಗುತ್ತದೆ. (ಬಿಡಿನುಡಿ ಸಂಚಯ, ಪುಟ: 33-34).

ಶಿಷ್ಟ ರೀತಿಯಲ್ಲಿ ಭಾರತೀಯ ಮತ್ತು ಕರ್ನಾಟಕ ಸಂಸ್ಕೃತಿಗಳನ್ನು ಅರ್ಥೈಸುವ ಆಲೂರರ ಚಿಂತನೆ ಪುರೋಹಿತಶಾಹಿಗೆ ಒತ್ತುಕೊಡುವುದು ಸ್ಪಷ್ಟವಾಗುತ್ತದೆ. ಕನ್ನಡ — ಕರ್ನಾಟಕತ್ವದ ಮೂಲಕ ನಾಡಿನ ಸಾಂಸ್ಕೃತಿಕ ವೈಭವವನ್ನು ಅವರು ಗುರುತಿಸಿ, ಎತ್ತಿಹಿಡಿಯುತ್ತಾರೆ. ಅವರು ಕರ್ನಾಟಕದ ಧರ್ಮ, ಸಾಹಿತ್ಯ, ಚರಿತ್ರೆ, ಶಿಲ್ಪ — ಸಂಗೀತ, ಕಲೆ, ಉದ್ಯಮ, ಆಚಾರ — ವಿಚಾರ ಮುಂತಾದ ಎಲ್ಲ ಕ್ಷೇತ್ರಗಳಲ್ಲಿನ ಅನನ್ಯತೆಯು ಭಾರತೀಯ ಸಂಸ್ಕೃತಿಯನ್ನು ವಿಶಿಷ್ಟ ಬಗೆಯನ್ನಾಗಿಸುತ್ತದೆ ಎಂಬುದಾಗಿ ವಿಶ್ಲೇಷಿಸುತ್ತಾರೆ. ಕರ್ನಾಟಕ — ಭಾರತ ಸಂಸ್ಕೃತಿಗಳನ್ನು ಬೆರಸುವ ಆಲೂರರು ಅದನ್ನು ವಸಾಹತುಶಾಹಿ ಆಡಳಿತಕ್ಕೆ ಅಸ್ತ್ರವನ್ನಾಗಿ ಬಳಸಲು ಯೋಜಿಸುವುದು ತಿಳಿಯುತ್ತದೆ. ಅಂದಿನ ಸ್ಥಿತಿಯಲ್ಲಿ ಭಾರತೀಯ ಸಂಸ್ಕೃತಿಯೇ ಬೇರೆ, ಪಾಶ್ಚಾತ್ಯ ಸಂಸ್ಕೃತಿಯೇ ಬೇರೆ ಎನ್ನುವುದನ್ನು ಜನತೆಯಲ್ಲಿ ಮೂಡಿಸಲು ರಾಷ್ಟ್ರೀಯ ಹೋರಾಟಗಾರರು ಪ್ರಯತ್ನಿಸಿದ್ದಾರೆ. ಆ ನಿಟ್ಟಿನಲ್ಲಿಯೇ ಆಲೂರರೂ ಸಹ ಮುಂದುವರೆಯುವುದು. ಇವರು ಪರಕೀಯ ಆಘಾತಕ್ಕೆ ಈಡಾಗಿರುವ ಭಾರತೀಯ ಸಂಸ್ಕೃತಿಯನ್ನು ಜನರಿಗೆ ಮನವರಿಕೆ ಮಾಡಿಕೊಡುವ ಚಿಂತನೆ ನಡೆಸುತ್ತಾರೆ. ಆದ್ದರಿಂದಲೇ ಅವರು,

> "... ಈ ಭರತ ಭೂಮಿಯ ಸಂಸ್ಕೃತಿಯ ಜ್ಞಾನವು ನಮಗೆ ಆಗದೆ ಅದರೊಳಗಿನ ಒಂದು ಭಾಗವಾದ ಕರ್ನಾಟಕದ ಸಂಸ್ಕೃತಿಯ ಜ್ಞಾನವು ನಮಗೆ ಆಗಲಾರದು..." (ಜ.ಕ., ಡಿ.1923, ಪುಟ:154–55)

ಎನ್ನುವುದರ ಮೂಲಕ ಒಂದೇ ಸಂಸ್ಕೃತಿಯನ್ನು ಗುರುತಿಸುವುದು.

ವೇದ — ಉಪನಿಷತ್ತುಗಳನ್ನು ಒಳಗೊಂಡ ಸಂಸ್ಕೃತಿಯನ್ನು ಒಪ್ಪುವವನು ಮಾತ್ರ ಭಾರತೀಯ, ಕನ್ನಡಿಗ ಆಗಲು ಸಾಧ್ಯ ಎಂಬುದು ಆಲೂರರ ಚಿಂತನೆಯ ಒಟ್ಟು ಸಾರ. ಇದು ತಿಲಕ್, ವೀರ ಸಾವರ್ಕರ್ ಅಂಥವರ ಹಿಂದೂ ರಾಷ್ಟ್ರೀಯವಾದದ ಪ್ರಭಾವ ಎಂದು ಬೇರೆ ಹೇಳಬೇಕಿಲ್ಲ. ಆದರೆ ಶಂ.ಬಾ. ಈ ರೀತಿಯ ಚಿಂತನೆಗಿಂತ ಭಿನ್ನವಾಗಿ ನಿಂತು ಸಮಷ್ಟಿ — ಪ್ರಜ್ಞೆಯ, ಸಮುದಾಯಿಕ ಜೀವನದ ಒಳನೋಟಗಳ ಕನ್ನಡ ಸಂಸ್ಕೃತಿಯನ್ನು ಹುಡುಕುತ್ತಾರೆ. ಶಂಬಾ ಅವರು ಆ ಕಾಲದ ವೈದಿಕ ಚಿಂತನೆಯನ್ನು ತೀಕ್ಷ್ಣವಾಗಿ ಟೀಕೆಗೆ ಒಳಪಡಿಸುವುದು ಸ್ಪಷ್ಟವಾಗುತ್ತದೆ (ಬ. ಕಲ್ಬುರ್ಗಿ, ಸಿರಿಗನ್ನಡ, ಪುಟ:168 ಅಆ). ಆದರೆ ಆಲೂರರಲ್ಲಿ ಅಂಥದ್ದನ್ನು ಕಾಣಲು ಆಗುವುದಿಲ್ಲ. ಬಹುಶಃ ಇದಕ್ಕೆ ಇವರ ಇಬ್ಬರ ನಡುವಿನ ವಿಭಿನ್ನ ಆಲೋಚನಾ ನೆಲೆಗಳೇ ಕಾರಣ.

ಆಲೂರರು ತಾವು ಅರ್ಥ ಮಾಡಿಕೊಂಡಿದ್ದ ಸಂಸ್ಕೃತಿಯ ಅನನ್ಯತೆಯನ್ನು ಪರಕೀಯರಿಂದ ಉಳಿಸಿಕೊಳ್ಳುವುದು ಸಾಧ್ಯ ಎಂದು ಅರಿತಿದ್ದರು. ಅನನ್ಯತೆಯ ಉಳಿವಿನ ವಿಚಾರ ಭಾವನಾತ್ಮಕವಾದ ವಿಚಾರವಾಗಿ ಆಲೂರರ ಚಿಂತನೆಯಿಂದ ವ್ಯಕ್ತ ಆಗಿದೆ. ಆದರೆ ಅದು ಕೇವಲ ಭಾವನಾತ್ಮಕವಾದದ್ದೇ ಅಲ್ಲ, ಭೌಮಾತ್ಮಕವೂ ಹೌದು (ನಾಗರಾಜ, ಕಿ.ರಂ., ಸಿರಿಗನ್ನಡ, ಪುಟ:195). ಸಂಪೂರ್ಣ ಅನನ್ಯತೆಯನ್ನು ಉಳಿಸಿಕೊಂಡು ಮುಂದುವರಿಯಲು ಸಾಧ್ಯ ಎಂಬ ಚಿಂತನೆಯನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳಲು ಸಾಧ್ಯ ಆಗುವುದಿಲ್ಲ.

### 3.4 ಭಾಷೆ ಮತ್ತು ಆಲೂರರು:

ಭಾಷೆಯನ್ನು ಕುರಿತ ಆಲೂರರ ಚಿಂತನೆ ಬಹಳ ವ್ಯಾಪಕವಾದುದು. ಛಿದ್ರವಾಗಿದ್ದ ಅಂದಿನ ಕನ್ನಡ ಪ್ರದೇಶಗಳಲ್ಲಿನ ವಿಭಿನ್ನ ಕನ್ನಡ ಭಾಷಾ ಶೈಲಿಗಳನ್ನು ಏಕರೂಪಕ್ಕೆ ತರುವ ನಿಟ್ಟಿನಲ್ಲಿ ಆಲೋಚನೆ ಮಾಡಿ ಕಾರ್ಯಪ್ರವೃತ್ತರಾಗುತ್ತಾರೆ. ಉತ್ತರ ಕರ್ನಾಟಕ ಮತ್ತು ದಕ್ಷಿಣದ ಮೈಸೂರು

ಸಂಸ್ಥಾನದ ಕನ್ನಡ ಭಾಷಾ ಪ್ರಭೇದಗಳಲ್ಲಿನ ದೋಷಗಳನ್ನು ತೊಡೆದುಹಾಕಲು ವೇದಿಕೆ – ಸಮಾರಂಭಗಳನ್ನು ರೂಪಿಸಿದವರು ಇವರು. 'ವಂಗ ಭಂಗ' ದ ಚಳುವಳಿಯ ನಂತರ ಭಾಷಾ ತತ್ವಕ್ಕೆ ಎಲ್ಲಿಲ್ಲದ ಆದ್ಯತೆ ದೊರಕಿತು. ಭಾಷೆಯನ್ನು ಆಧಾರವನ್ನಾಗಿ ಇಟ್ಟುಕೊಂಡು ಪ್ರಾಂತರಚನೆಯನ್ನು ಮಾಡುವ ಚಿಂತನೆ ಉತ್ತರ ಭಾರತದಲ್ಲಿ ಆರಂಭ ಆಗಿತ್ತು. ದಕ್ಷಿಣ ಭಾರತದಲ್ಲಿ ಮೊದಲ ಬಾರಿಗೆ ಆ ರೀತಿಯಲ್ಲಿ ಆಲೋಚನೆ ಮಾಡಿರಲಿಲ್ಲ. ಈ ನಿಟ್ಟಿನಲ್ಲಿ ಆದರೆ ಕನ್ನಡ ಮಾತನಾಡುವ ಎಲ್ಲ ವಿಭಜಿತ ಪ್ರದೇಶಗಳನ್ನು ಒಂದುಗೂಡಿಸುವ ಪ್ರಯತ್ನ ಮಾಡಿದವರಲ್ಲಿ ತಾವೇ ಮೊದಲಿಗರು ಎಂದು ಆಲೂರರೇ ಹೇಳಿಕೊಂಡಿದ್ದಾರೆ.

ನೆರೆಯ ಆಂಧ್ರ ಪ್ರಾಂತ್ಯದವರು ಪ್ರತ್ಯೇಕ ಪ್ರಾಂತ್ಯವನ್ನು ಬಯಸಿದುದು ಭಾಷಾ ತತ್ವದ ಅನುಗುಣವಾಗಿ ಅಲ್ಲ. ಅವರು ಆರಂಭದಲ್ಲಿ ಆಲೋಚನೆ ಮಾಡಿದ್ದು, ಒಂದು ಪ್ರತ್ಯೇಕ ಪ್ರಾಂತ್ಯ ಆಗುವಷ್ಟು ತಮ್ಮ ಜನಸಂಖ್ಯೆ ಇರುವುದರಿಂದ ಬೇರೆ ರಾಜ್ಯವನ್ನು ಹೊಂದಬಹುದು ಎಂಬ ನಿಟ್ಟಿನಲ್ಲಿ. ಆಲೂರರಂಥವರಿಗೆ ಭಾಷೆಯ ಕಲ್ಪನೆ ಮುಖ್ಯವಾಗಿತ್ತು. ಆದರೆ ಆಂಧ್ರರಿಗೆ ಜನಸಂಖ್ಯೆಯೇ ಮುಖ್ಯವಾದುದು. ಅಂತಿಮವಾಗಿ ಆಲೂರರ ಭಾಷಾತತ್ವವೇ ರಾಜ್ಯಗಳ ಪುನರ್ ವಿಂಗಡಣೆಗೆ ಮೂಲಭೂತ ಆಧಾರವಾಗಿ ಪರಿಗಣಿತವಾಯಿತು.

ಆಲೂರರು ಇದ್ದ ಅಂದಿನ ಉತ್ತರ ಕರ್ನಾಟಕದ ಪ್ರದೇಶ ಮುಂಬಯಿ ಪ್ರಾಂತ್ಯದ ಮರಾಠಿ ಪ್ರಭಾವವನ್ನು ಗಾಢವಾಗಿ ತನ್ನದನ್ನಾಗಿಸಿಕೊಂಡಿತ್ತು. ಧಾರವಾಡ, ಬೆಳಗಾವಿಗಳಂಥ ಕನ್ನಡ ಜಿಲ್ಲೆಗಳು ಸಂಪೂರ್ಣ ಮರಾಠಿ ಮೋಹಿತ ಜಿಲ್ಲೆಗಳಾಗಿ ಪರಿವರ್ತಿತಗೊಂಡಿದ್ದವು. ಮರಾಠಿಗರ 'ಬೃಹನ್ ಮಹಾರಾಷ್ಟ್ರ' ಪರಿಕಲ್ಪನೆಯ ಆಕ್ರಮಣಕಾರಿ ಧೋರಣೆ ಕನ್ನಡಿಗರನ್ನು ಆವರಿಸಿದ್ದ ಕಾಲ ಅದು. ಇಂಥ ಸಂದರ್ಭದಲ್ಲಿ ಕನ್ನಡಿಗರು ಕನ್ನಡದಲ್ಲಿ ಮಾತನಾಡುವುದೇ ಅವಮಾನ ಎಂದು ತಿಳಿದಿದ್ದರು. ಆಗ ಮುದವೀಡು ಕೃಷ್ಣರಾವ್, ನರಗುಂದಕರ ರಾಮರಾವ್, ಶಾಂತಕವಿ – ಮೊದಲಾದ ಮಿತ್ರರೊಂದಿಗೆ ಆಲೂರರು ಪ್ರವಾಸ ಮಾಡಿ 'ಕನ್ನಡ – ಕರ್ನಾಟಕತ್ವ' ದ ಪ್ರಜ್ಞೆಯನ್ನು ಮೂಡಿಸಿದರು. ಜನತೆಯನ್ನು ಎಚ್ಚರಿಸತೊಡಗಿದರು. ಆದ್ದರಿಂದಲೇ ಅವರು –

> " ಅಖಂಡ ಕರ್ನಾಟಕಕ್ಕೆ ಅತ್ಯಂತ ನಿಕಟವಾದ ವಿಷಯವೆಂದರೆ ಕನ್ನಡ ನುಡಿ. ಅಖಂಡ ಕರ್ನಾಟಕ ನಿರ್ಮಾಣಕ್ಕೆ ಕನ್ನಡ ನುಡಿಯೇ ಬೆನ್ನೆಲುಬು. ಕನ್ನಡ ನುಡಿಯ ಆಧಾರದ ಮೇಲೆಯೇ ಅದರ ಭವಿತವ್ಯವು ಅವಲಂಬಿಸಿದೆ. ಕನ್ನಡ ನುಡಿಯೊಂದಾಗದೆ ನಾಡೊಂದಾಗದು! "
>
> (ಕ.ವಿ; ಪುಟ: 145)

— ಎಂಬ ಖಚಿತ ನಿಲುವಿನಿಂದ ಕನ್ನಡತನವನ್ನು ಪ್ರದರ್ಶಿಸಿದ್ದು. ಇಲ್ಲಿ ಆಲೂರರು ಮರಾಠಿ ಭಾಷಿಕರ ಆಕ್ರಮಣಕಾರಿ ಪ್ರವೃತ್ತಿಗಿಂತ ಭಿನ್ನವಾಗಿ ನಿಲ್ಲುತ್ತಾರೆ. ಅವರು ಕನ್ನಡ ಭಾಷಾ ಪ್ರಶ್ನೆಯನ್ನು ಹಕ್ಕಿನ ಹಿನ್ನೆಲೆಯಲ್ಲಿ ಆಲೋಚಿಸಿದ್ದಾರೆ. ಆದರೆ ಆಲೂರರು 'ದೇಶ ಭಾಷೆಗಿಂತ ಮಾತೃಭಾಷೆ ದೊಡ್ಡದು ಎನಿಸುವುದಿಲ್ಲ' ಎಂಬ ಇಂಗಿತವನ್ನು ವ್ಯಕ್ತಪಡಿಸಿರುವುದರಿಂದ ಇತರ ಭಾಷಿಕರಂತೆ ಸಂಕುಚಿತರಾಗಿ ಯೋಚನೆ ಮಾಡಿಲ್ಲ ಎಂಬುದು ಸ್ಪಷ್ಟ. ಅಲ್ಲದೆ ಮರಾಠಿ ಭಾಷೆಯನ್ನು ಪ್ರೀತಿಸುತ್ತಿದ್ದ ಆಲೂರರು ಅದಕ್ಕಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಮುಖ್ಯವಾಗಿ ಭಾಷಾಚಿಂತನೆಯಲ್ಲಿ ಆಲೂರರು ಕನ್ನಡಕ್ಕೆ ತಕ್ಕುದಾದ ಸ್ಥಾನ ಕೇಳುತ್ತಾರೆಯೇ ಹೊರತು ಪರಭಾಷಾ ದ್ವೇಷಿಯಾಗಿ ಅಲ್ಲ.

ವೆಂಕಟರಾಯರು ಬೇರೆ ಭಾಷೆಗಳ ಬಗ್ಗೆ, ಬೇರೆ ಭಾಷಿಕರ ಆಚಾರ — ವಿಚಾರಗಳ ಬಗ್ಗೆ, ಅವರ ಅವಶ್ಯಕತೆಗಳ ಬಗ್ಗೆ ಸ್ಪಷ್ಟ ಕಲ್ಪನೆ ಹೊಂದಿದ್ದವರು. ಆದ್ದರಿಂದಲೇ ಅವರು ಕರ್ನಾಟಕದ ಉಪಭಾಷೆಗಳನ್ನೂ ಸಹ ಗಣನೆಗೆ ತೆಗೆದುಕೊಳ್ಳುವುದು. ತುಳು, ಕೊಂಕಣ್, ಕೊಡವ ಮೊದಲಾದ ಭಾಷೆಗಳನ್ನು ತಮ್ಮ ಕರ್ನಾಟಕತ್ವದ ಚೌಕಟ್ಟಿನಲ್ಲಿಯೇ ಇಟ್ಟು ಕನ್ನಡ ಭಾಷೆಯ ಬಗ್ಗೆ ಆದ್ಯತೆ ನೀಡುತ್ತಾರೆ. ಅಂದರೆ ರಾಜ್ಯಭಾಷೆ ಹಾಗೂ ರಾಜಕಾರಣಕ್ಕೋಸ್ಕರ ಕನ್ನಡಕ್ಕೆ ಮೊದಲ ಸ್ಥಾನ ನೀಡುವ ಅನಿವಾರ್ಯತೆಯನ್ನು ಅವರಲ್ಲಿ ನೋಡಬಹುದು. ಕನ್ನಡ ಮಾತನಾಡುವ ಪ್ರದೇಶಗಳಲ್ಲಿ ಸಾರ್ವಜನಿಕವಾಗಿ ಬೇರೆ ಬೇರೆ ಭಾಷೆಗಳನ್ನು (ತಮಿಳು, ತೆಲುಗು, ಮಲಯಾಳ, ಉರ್ದು ಇತ್ಯಾದಿ) ಆಡುವುದರಿಂದ ಅಖಂಡ ಕರ್ನಾಟಕದ ಆಶಯಕ್ಕೆ ಹೇಗೆ ತೊಂದರೆಗಳು ಉಂಟಾಗುತ್ತವೆ ಎಂಬುದನ್ನು ಸ್ಪಷ್ಟಪಡಿಸುವುದು ಅವರ ಚಿಂತನೆಯ ಒಟ್ಟು ಸಾರ ಆಗಿರುತ್ತದೆ.

ರಾಷ್ಟ್ರೀಯ ಭಾಷೆ (ಹಿಂದಿ) ಗೆ ಹೇಗೆ ಗೌರವವನ್ನು ವ್ಯಕ್ತಪಡಿಸುತ್ತಿದ್ದರೋ ಹಾಗೆಯೇ ಪರ ಭಾಷೆಗಳ ಬಗ್ಗೆಯೂ ಉತ್ತಮವಾದ ಅಭಿಪ್ರಾಯವನ್ನು ಆಲೂರರು ವ್ಯಕ್ತಪಡಿಸಿದ್ದಾರೆ. ಲಿಪಿಯಲ್ಲಿ ತೆಲುಗು — ಕನ್ನಡವೂ; ನುಡಿಯಲ್ಲಿ ತಮಿಳು, ತೆಲುಗು, ಕನ್ನಡ ಭಾಷೆಗಳು ಸಾಧ್ಯವಾದಷ್ಟು ಒಂದುಗೂಡಬೇಕು ಎಂಬ ಅಭಿಮತ ಅವರದು. ಕರ್ನಾಟಕದಲ್ಲಿ ಇರುವಂಥ ಭಿನ್ನ ಭಾಷಿಗರು ಕನ್ನಡದೊಡನೆ 'ತಾದಾತ್ಮ್ಯ' ವನ್ನು (Identification )

ಹೊಂದುವುದರ ಮೂಲಕ ಕರ್ನಾಟಕತ್ವಕ್ಕಾಗಿ ಕೆಲಸ ಮಾಡಬೇಕೆಂಬ ವಾದವನ್ನು ಮುಂದಿಟ್ಟವರೇ ಅವರು. ಆದುದರಿಂದಲೇ ಗುರುನಾಥ ಘಾಟಕ, ರಾನಡೆ, ಕರಮರಕರ, ಬೇಂದ್ರೆ, ಶಂಬಾ ಜೋಶಿ, ಬಾಲಚಂದ್ರ ಘಾಣೇಕರ, ಗದ್ರೆ ಮೊದಲಾದವರು ಆಲೂರರ ವಾದಕ್ಕೆ ಪ್ರತಿಸ್ಪಂದಿಸಿದ್ದು.

ಆಲೂರರ ಕನ್ನಡತ್ವವು ರಾಷ್ಟ್ರೀಯ ಭಾಷೆಯಾಗಲಿ (ಹಿಂದಿ), ಸ್ವಾತಂತ್ರ್ಯದ ಹೋರಾಟಕ್ಕಾಗಲಿ ವಿರುದ್ಧವಾಗಿ ನಿಂತು ಆಲೋಚನೆ ಮಾಡುವುದಾಗಿರಲಿಲ್ಲ. ಈ ಹಿನ್ನೆಲೆಯಲ್ಲಿಯೇ ಅವರು —

> "ಕರ್ನಾಟಕಸ್ಥರು ಭಾಷಾನ್ವಯ ಪ್ರಾಂತದ ಬಗೆಗೆ
> ಪ್ರಯತ್ನಿಸಿದಾಗ ರಾಷ್ಟ್ರೀಯತ್ವವನ್ನು ಎಂದೂ ಮರೆತಿಲ್ಲ."
>
> (ಕ.ವಿ., ಪುಟ: 146)

ಎಂದಿರುವುದು. ಅಂದು ಆಲೂರರ ಭಾಷಾಚಿಂತನೆಯಿಂದ ರಾಷ್ಟ್ರೀಯ ಹೋರಾಟಕ್ಕೆ ತೊಂದರೆಗಳು ಉಂಟಾಗುತ್ತವೆ ಎಂಬ ಅನುಮಾನ — ಆತಂಕಗಳು ಹುಟ್ಟಿಕೊಂಡಿದ್ದಿರಬೇಕು. ಅಲ್ಲದೆ ಸಮಗ್ರ ಭಾರತೀಯರು ಬ್ರಿಟಿಷಶಾಹಿಯನ್ನು ಎದುರಿಸುವಲ್ಲಿ ಭಾಷಿಕ ನೆಲೆಗಳು ಕವಲುದಾರಿಯನ್ನು ಹಿಡಿಸುತ್ತವೆ ಎಂಬ ಕೆಲವರ ಅಭಿಪ್ರಾಯಗಳು ಬಹಳ ಒತ್ತಡವನ್ನು ತಂದಿರಬಹುದು. ಆದ್ದರಿಂದಲೇ ಆಲೂರರು ಮೇಲಿನಂತೆ ಅಭಿಪ್ರಾಯ ಪಟ್ಟಿರುವುದು.

ಮೈಸೂರು ಸಂಸ್ಥಾನದಲ್ಲಿ ಉತ್ತರ ಕರ್ನಾಟಕದ ಭಾಷಾ ಸ್ಥಿತಿಗಿಂತಲೂ ಭಿನ್ನವಾದ ಸ್ಥಿತಿಗತಿಗಳು ಇದ್ದುವು. ಅರಮನೆಯ (ರಾಜಮನೆತನದ) ಆಶ್ರಯ ಸಂಸ್ಕೃತಕ್ಕೆ ಮೀಸಲು ಆಗಿತ್ತು. ಆಡಳಿತದಲ್ಲಿ ಅಧಿಕಾರಿಗಳು ತಮಿಳಿಗೆ ಆದ್ಯತೆ ನೀಡಿದ್ದರು. ಇಂಥ ವಾತಾವರಣವನ್ನು ಆಲೂರರು ಸಹಿಸಲಿಲ್ಲ. ಇದಕ್ಕೆ ಪರಿಹಾರವಾಗಿ 'ಕರ್ನಾಟಕ ಸಾಹಿತ್ಯ ಪರಿಷತ್ತಿ'ನಂಥ ಒಂದು ಕನ್ನಡ ಸಾಹಿತ್ಯಕ ಸಂಸ್ಥೆಯನ್ನು ಸಂಸ್ಥಾನದಲ್ಲಿಯೇ (ಬೆಂಗಳೂರಿನಲ್ಲಿ, 1915) ಸ್ಥಾಪಿಸಲು ಹಟತೊಟ್ಟರು. ಇದರಿಂದ ಕ್ರಮೇಣ 'ಕನ್ನಡತ್ವ' ಆವರಿಸುತ್ತದೆ ಎಂಬ ಆಶಯ ಅವರದಾಗಿರಬೇಕು. (ಕ.ಪ್ರ., 13.7.1980). ಒಟ್ಟಿನಲ್ಲಿ ನುಡಿ (ಕನ್ನಡ) ಜಾಗೃತಿ ಆಗದೆ ನಾಡು (ಕರ್ನಾಟಕ) ಜಾಗೃತಿ ಹೊಂದಲು ಸಾಧ್ಯವೇ ಇಲ್ಲ ಎಂಬುದು ಅವರ ಧೋರಣೆ.

ವೆಂಕಟರಾಯರು ಕನ್ನಡ ಮಾತನಾಡುವ ಜನರನ್ನು (ಕನ್ನಡಿಗರನ್ನು) ಒಂದುಗೂಡಿಸುವ, ಎಲ್ಲ ಪ್ರದೇಶಗಳನ್ನು ಏಕ ಆಡಳಿತಕ್ಕೆ ಒಳಪಡಿಸುವ ಆಶಯಕ್ಕೆ ಯಾವ ಸಣ್ಣ ಅವಕಾಶವನ್ನು ಬಿಡದೆ ಬಳಸಿಕೊಳ್ಳುತ್ತಿದ್ದರು. ಉದ್ಧರಿಸುವುದಾದರೆ ಮರಾಠಿಮಯವಾಗಿದ್ದ ಧಾರವಾಡದ ಕರ್ನಾಟಕ ಕಾಲೇಜಿಗೆ ಶ್ರೀರಂಗರು ಸಂಸ್ಕೃತ ಅಧ್ಯಾಪಕರಾಗಿ ಬರುತ್ತಾರೆ. ಬಂದಿರುವವರು 'ಕನ್ನಡಿಗ' ಎಂಬ ಒಂದೇ ಕಾರಣಕ್ಕಾಗಿ ಶ್ರೀರಂಗರನ್ನು ಆಲೂರರು ಭೇಟಿ ಆಗುತ್ತಾರೆ. ಅಲ್ಲದೆ

> " ಕಾಲೇಜದಲ್ಲಿ ಕನ್ನಡದ ವಾತಾವರಣವೇ ಇಲ್ಲ. ಇದನ್ನು ಯುವಕರಾದ ನೀವು ಸರಿಪಡಿಸಬೇಕು "

— ಎಂದು ಹೇಳಿ ಅವರನ್ನು ಹುರಿದುಂಬಿಸಿದರು. ಈ ರೀತಿ ಕನ್ನಡಿಗರಲ್ಲಿ ಮುಂದಾಳತ್ವದ ಭಾವನೆ ಮೂಡಿಸಿ ಕಾರ್ಯಪ್ರವೃತ್ತರನ್ನಾಗಿಸುತ್ತಿದ್ದ ಆಲೂರರನ್ನು ಶ್ರೀರಂಗರು ಒಂದೆಡೆ ನೆನಪು ಮಾಡಿಕೊಳ್ಳುತ್ತಾರೆ. (ಕನ್ನಡಪ್ರಭ, 13.7.80).

## 3.5 ಧರ್ಮ ಮತ್ತು ಕನ್ನಡ ಕರ್ನಾಟಕತ್ವದ ಚಿಂತನೆ

ಆಲೂರರು ಮೂಲತಃ ಸಂಪ್ರದಾಯವಾದಿಗಳು. ಆಧ್ಯಾತ್ಮಿಕ ಪ್ರವೃತ್ತಿಯವರಾದ ಇವರು 'ಧರ್ಮಜಿಜ್ಞಾಸು' ಎಂದೂ ಸಹ ಹೇಳಿಕೊಂಡಿದ್ದಾರೆ. ಅಂದರೆ ಎಲ್ಲ ಧರ್ಮಗಳಲ್ಲಿನ ತತ್ತ್ವಗಳನ್ನು, ಜ್ಞಾನವನ್ನು ಪಡೆಯಲು ಹಾತೊರೆದವರು. ಭಾರತೀಯ ಸಂಸ್ಕೃತಿಯ ಜೀವಾಳವನ್ನು ಎಲ್ಲ ಧರ್ಮಗಳ ಸಮನ್ವಯದಲ್ಲಿ ಆಲೂರರು ನೋಡಲು ಅಪೇಕ್ಷಿಸುತ್ತಾರೆ. ಈ ನಿಟ್ಟಿನಲ್ಲಿ ಅವರು ಒಬ್ಬ ಸಮನ್ವಯ ಚಿಂತಕ ಎನಿಸಿದ್ದಾರೆ. ಆದರೆ ಕೆಲವೆಡೆ ಅವರ ಏಕಮುಖ ನಿಲುವುಗಳು ಪ್ರಬಲ 'ಹಿಂದೂವಾದಿ' ಎಂಬ ಧೋರಣೆಯನ್ನು ವ್ಯಕ್ತಪಡಿಸುತ್ತವೆ. ಎರಡೂ ರೀತಿಯ ನಿಲುವುಗಳು ಆಲೂರರ ಚಿಂತನೆಯಲ್ಲಿ ಇವೆ. ಆದ್ದರಿಂದ ಈ ಎರಡೂ ರೀತಿಯ ಚಿಂತನೆಯ ಹಿನ್ನೆಲೆಯಲ್ಲಿಯೆ ಕರ್ನಾಟಕತ್ವವನ್ನು ವಿಶ್ಲೇಷಿಸುವುದು ಸೂಕ್ತ ಅನ್ನಿಸುತ್ತದೆ.

ಕರ್ನಾಟಕದ ಚರಿತ್ರೆಯಲ್ಲಿ ಧರ್ಮ ಸಹಿಷ್ಣುತೆ, ಸಮನ್ವಯ ದೃಷ್ಟಿಗಳನ್ನು ಆಲೂರರು ಗುರುತಿಸುತ್ತಾರೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಬೌದ್ಧ, ಜೈನ, ವೀರಶೈವ ಮೊದಲಾದ ಧಾರ್ಮಿಕ ಪಂಥಗಳಿಗೆ ಮೂಲ ಸ್ಥಾನ ಕರ್ನಾಟಕವೇ ಆಗಿದೆ ಎಂಬುದು ಆಲೂರರ ವಾದ (ಬ.ಸಂ, ಪು: 28)

ಅಲ್ಲದೆ ಅವರು ಮಧ್ವಾಚಾರ್ಯರ 'ಆತ್ಮ — ಪರಮಾತ್ಮ' ಭಾವಗಳ ತತ್ವವನ್ನು ಕ್ರೈಸ್ತರ ಬೈಬಲಿನಲ್ಲೂ ಕಾಣುತ್ತಾರೆ. ಅದೇ ರೀತಿಯಲ್ಲಿ ಇಸ್ಲಾಂ ಧರ್ಮದಲ್ಲಿನ 'ಲಾ ಇಲ್ಲಾ' ಎಂಬ ಒಂದೇ ವಾಕ್ಯದಲ್ಲಿ ಅನೇಕ ತತ್ವಗಳನ್ನು ಹಿಡಿದಿಡುವ, ಅರ್ಥೈಸುವ ಪರಿಪಾಠವನ್ನು ಬೇರೆ ಎಲ್ಲೂ ಕಾಣಲು ಸಾಧ್ಯ ಇಲ್ಲ ಎಂಬ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ. ಅವರು ಒಬ್ಬರ ಧರ್ಮದಲ್ಲಿ ಮತ್ತೊಬ್ಬರು ಅಡ್ಡಬರುವುದು ಸರಿಯಲ್ಲ ಎಂಬ ತತ್ವವನ್ನು ಪ್ರತಿಪಾದಿಸಿದರು. ಅವರು ಈ ತತ್ತ್ವಕ್ಕೆ ಬೆಂಬಲವಾಗಿ ಚರಿತ್ರೆಯನ್ನು ಬಳಸುತ್ತಾರೆ. ಅಂದರೆ —

> "ಕೃಷ್ಣದೇವರಾಯನೂ ಈ ತತ್ವಕ್ಕನುಸಾರವಾಗಿಯೇ ಮುಂದೆ ನಡೆದು ಮುಸಲ್ಮಾನರಿಗೆ ಪ್ರತಿಜ್ಞೆ ಮಾಡಹೇಳುವಾಗ, ಕುರಾಣಕ್ಕೇನೆ ನಮಸ್ಕರಿಸಲಿಕ್ಕೆ ಹೇಳುತ್ತಿದ್ದರು. ವಿಜಯನಗರದ ಅರಮನೆಯ ಹತ್ತಿರವೇ ಮಸೀದಿಗೆ ಸ್ಥಾನ"
>
> (ಬ.ಸಂ., ಪುಟ: 29)

ನೀಡಿದ್ದ ಎಂಬ ಉದಾಹರಣೆಯನ್ನು ನೀಡುತ್ತಾರೆ. ಆದರೆ ಆಲೂರರು ಹಿಂದೂ ಧರ್ಮವೇ ಪರಿಪೂರ್ಣ; ಉಳಿದ್ದು ಅಪರಿಪೂರ್ಣ ಎಂಬ ವಿರುದ್ಧವಾದ ಧೋರಣೆಯನ್ನೂ ಸಹ ವ್ಯಕ್ತಪಡಿಸಿರುವುದು ವಿರೋಧಾಭಾಸಕ್ಕೆ ಎಡೆ ಮಾಡಿಕೊಡುತ್ತದೆ. ಅಲ್ಲದೆ ಹಿಂದುತ್ವದ ಔನ್ನತ್ಯದ ಸ್ಥಿತಿಯನ್ನು ಅವರಲ್ಲಿ ಗುರುತಿಸುವಂತೆ ಮಾಡುತ್ತದೆ. ಇದರಿಂದ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳಿಂದ ದೂರ ಸರಿಯುವುದು ತಿಳಿಯುತ್ತದೆ.

ಕರ್ನಾಟಕದಲ್ಲಿ ಎಲ್ಲ ಪಂಥಗಳಿಗೂ ಸೇರಿದ ಜನರು ಇರುವುದರಿಂದ ಅವರು ಯಾವುದೇ ನಿರ್ದಿಷ್ಟ ಪಂಥವೊಂದಕ್ಕೆ ಪ್ರಾಶಸ್ತ್ಯ ನೀಡುವುದಿಲ್ಲ. ಸಮಸ್ತ ಕನ್ನಡಿಗರನ್ನೂ ಗಮನದಲ್ಲಿಟ್ಟುಕೊಂಡು ಕಾರ್ಯ ನಿರ್ವಹಿಸುವುದು ಆಲೂರರ ಅಂದಿನ ಸ್ಥಿತಿ ಆಗಿತ್ತು. ಅವರ ಅಖಂಡ ಕರ್ನಾಟಕ ನಿರ್ಮಾಣದ ಆಶಯಕ್ಕೆ ಅದು ಸೂಕ್ತವಾ ಹಾದು. ಆದುದರಿಂದಲೇ ಅವರು ವಿದ್ಯಾರಣ್ಯ, ಬಸವೇಶ್ವರ, ಕುಮಾರವ್ಯಾಸ, ನಿಜಗುಣ ಶಿವಯೋಗಿ, ಪಂಪ ಮೊದಲಾದವರ ಉತ್ಸವಗಳನ್ನು ನಾಡಹಬ್ಬಗಳನ್ನಾಗಿ ಆಚರಿಸಲು ಯೋಜಿಸುವುದು. 'ನಾಡಹಬ್ಬ' ಗಳಂಥ ಉತ್ಸವಗಳು ಸಮಸ್ತ ಕನ್ನಡಿಗರನ್ನು ಜಾಗೃತರನ್ನಾಗಿಸಲು ಉತ್ತಮ ಮಾಧ್ಯಮಗಳೆನಿಸಿದುವು. 'ನಾಡಹಬ್ಬ' ಪದ ಮೊದಲ ಬಾರಿಗೆ ಬಳಕೆಗೆ ಬಂದುದು ಧಾರವಾಡದಲ್ಲಿ. ಇದನ್ನು ಕುರಿತು ಬೇಂದ್ರೆ ಅವರು —

" ನಾಡಹಬ್ಬವು ರಾಷ್ಟ್ರೈಕ್ಯದ ಭೂಮಂಡಲೈಕ್ಯದ,
ತ್ರಿಲೋಕೈಕ್ಯದ ಕುರುಹಿನ ಹಬ್ಬ ಪರ್ವ "

(ವಿ.ಸ್ವರೂಪ, ಪುಟ: 972–3)

ಎಂಬುದಾಗಿ ವ್ಯಾಖ್ಯಾನಿಸುತ್ತಾರೆ. ಇದರಿಂದ ನಾಡಹಬ್ಬದ ವ್ಯಾಪ್ತಿ ಸ್ಪಷ್ಟ ಆಗುತ್ತದೆ. ಆಲೂರರೂ ಸಹ ಈ ಹಿನ್ನೆಲೆಯಲ್ಲಿಯೇ ಆಚರಿಸಲು ಹುರಿದುಂಬಿಸಿದರು. ಇಲ್ಲಿ ತಿಲಕರ ಶಿವಾಜಿ, ಗಣಪತಿ, ಗೋವು ಮೊದಲಾದ ಸಂಕೇತಗಳ ಬಳಕೆಗೂ ಆಲೂರರ ಸಂಕೇತಗಳ ಬಳಕೆಗೂ ಅಂಥ ಭಿನ್ನತೆಗಳು ಕಾಣುವುದಿಲ್ಲ.

ಆಲೂರರ ಕನ್ನಡ — ಕರ್ನಾಟಕತ್ವದ ವಿಚಾರಗಳಲ್ಲಿ ಅಭಿವ್ಯಕ್ತಗೊಳ್ಳುವುದು ವಿಶ್ವಶಕ್ತಿ, ವಿಶ್ವರೂಪ, ಪರಮಾತ್ಮ, ಕೃಷ್ಣ, ಧರ್ಮಕ್ಷೇತ್ರ, ಕುರುಕ್ಷೇತ್ರ, ಅಂತರ್ಯಾಮಿತ್ವ, ಸ್ಥೂಲ — ಸೂಕ್ಷ್ಮ — ಕಾರಣ ಶರೀರಗಳು ಇತ್ಯಾದಿ. ಇವು ಕರ್ನಾಟಕ — ಭಾರತ — ಜಗತ್ತನ್ನು ಒಂದಲ್ಲ ಒಂದು ರೀತಿಯಲ್ಲಿ ಹೊಂದಿಸಿ ಹೇಳಹೊರಡುತ್ತವೆ. ಇಂಥ ತಾತ್ವಿಕ ಚಿಂತನೆಯ ಹಿಂದೆ 'ಇಡಿ — ಬಿಡಿ' ಪರಿಕಲ್ಪನೆಗಳು ಕಾರ್ಯ ನಿರ್ವಹಿಸಿವೆ. ಸಾಂಖ್ಯ ದರ್ಶನದ ಪ್ರಭಾವವೂ ಆಗಿರಬಹುದು. ಆಲೂರರ ಮೇಲೆ ಅದ್ವೈತದ ವಿದ್ಯಾರಣ್ಯರ ಪ್ರಭಾವ ಆಗಿದೆ ಅನ್ನಿಸಿದರೂ ಮಾಧ್ವ ತತ್ವ (ದ್ವೈತ) ಅವರನ್ನು ಹೆಚ್ಚು ಸುತ್ತುವರೆದಿತ್ತು ಅನ್ನಿಸುತ್ತದೆ. ಇದಕ್ಕೆ ಅವರ ಸಾಂಪ್ರದಾಯಿಕ ಕೌಟುಂಬಿಕ ಹಿನ್ನೆಲೆಯೇ ಕಾರಣ.

ಆಧ್ಯಾತ್ಮಿಕವಾದ, ತಾತ್ವಿಕವಾದ ಅವರ ಕರ್ನಾಟಕತ್ವದ ಚಿಂತನೆಯಲ್ಲಿ ಬ್ರಿಟಿಷ್ (ಅಥವಾ ಪಾಶ್ಚಾತ್ಯ) ಸಂಸ್ಕೃತಿಯನ್ನು ಸನಾತನ (ಹಿಂದೂ) ಸಂಸ್ಕೃತಿಗೆ ವಿರೋಧವಾಗಿ ನೋಡುವ ನೋಟ ಅಡಗಿದೆ. ಭಾರತೀಯರದೇ ಆದ ಸಂಸ್ಕೃತಿ, ಪರಂಪರೆಗಳ ಮೂಲಕ ಕರ್ನಾಟಕತ್ವ, ರಾಷ್ಟ್ರೀಯತ್ವಗಳನ್ನು ಹೆಚ್ಚು ಮನಮುಟ್ಟುವಂತೆ ಮಾಡುವುದು ಆಲೂರರ ಕಾರ್ಯಧೋರಣೆ. ಆದ್ದರಿಂದಲೇ ಅವರ ವಿಚಾರಗಳು ಗೀತೆ, ವೇದ, ಉಪನಿಷತ್ತುಗಳ ಪ್ರಭಾವದ ಹಿನ್ನೆಲೆಯಿಂದ ಕರ್ನಾಟಕತ್ವದ ತೀರ್ಮಾನಗಳಾಗಿ ಹೊರಹೊಮ್ಮುವುದು. ಪ್ರತಿಯೊಬ್ಬನಲ್ಲೂ ಅಂತಸ್ಥ ಆಗಿರುವ ಧರ್ಮವನ್ನು ಅವರವರು ಗ್ರಹಿಸುವ ರೀತಿಯಲ್ಲಿಯೇ ಅರ್ಥೈಸಿ ಹೇಳಬೇಕು ಎಂಬುದನ್ನು ರಾಷ್ಟ್ರೀಯ ಹೋರಾಟಗಾರರು ಚೆನ್ನಾಗಿ ಅರಿತಿದ್ದರು. ಇದಕ್ಕೆ ಗಾಂಧಿ, ಅರವಿಂದ, ತಿಲಕ್, ಆಲೂರ ವೆಂಕಟರಾಯ ಮೊದಲಾದವರು ಹೊರತೇನಲ್ಲ.

ಆಲೂರರು ವ್ಯಕ್ತಿಗೂ, ರಾಷ್ಟ್ರಕ್ಕೂ ಧರ್ಮವನ್ನು ಗಂಟು ಹಾಕುತ್ತಾರೆ. ಈ ಹಿನ್ನೆಲೆಯಲ್ಲಿಯೇ ಅವರ ಕರ್ನಾಟಕತ್ವವು ಕೆಲವೆಡೆ ಪ್ರತಿಬಿಂಬಿತವಾಗಿದೆ. ಅಂದು ಗಾಂಧಿ ಚಿಂತಿಸಿದ, ಕಲ್ಪಿಸಿದ ರಾಷ್ಟ್ರೀಯತ್ವದ ರೂಪಕ್ಕೂ ಹಿಂದೂ ರಾಷ್ಟ್ರೀಯವಾದಿಗಳು ಕಲ್ಪಿಸಿದ ರಾಷ್ಟ್ರೀಯತ್ವದ ರೂಪಕ್ಕೂ ಹೆಚ್ಚು ವ್ಯತ್ಯಾಸಗಳು ಇವೆ. ಈ ಎರಡೂ ರಾಷ್ಟ್ರ ದರ್ಶನಗಳು ಒಂದೇ ಹಾದಿಯಲ್ಲಿ ಹೊರಟರೂ ಸಹ ಸೇರುವ ನೆಲೆಗಳು ಬೇರೆ ಬೇರೆ. ವೀರತ್ವ — ಶೂರತ್ವಗಳನ್ನು ಸಾರುವ 'ಬಲಿಷ್ಠ ಪ್ರಭುತ್ವ'ದ ಧಾರೆ ಒಂದಾದರೆ, ಮತ್ತೊಂದು ಶಾಂತಿ, ಸೌಹಾರ್ದ, ಸತ್ಯ — ಅಹಿಂಸೆಗಳನ್ನು ಸಾರುವ ಆಶಯವನ್ನು ಒಳಗೊಂಡದ್ದು. ಆಲೂರರು ಬಲಿಷ್ಠ ಪ್ರಭುತ್ವದ ಧಾರೆಗೆ ಸೇರಿಕೊಳ್ಳುತ್ತಾರೆ. ಅಹಿಂಸೆ ಭಾರತೀಯ ಸಂಸ್ಕೃತಿಯ ಪರಮ ಮೌಲ್ಯ ಎನ್ನುವ ಗಾಂಧಿ ಅವರ ಚಿಂತನೆ ಆಲೂರರ ಚಿಂತನೆಗೆ ವಿರುದ್ಧವಾದುದು. ಅಹಿಂಸೆಯ ತತ್ತ್ವವನ್ನು ಆಲೂರರು ಒಪ್ಪಿದರೂ ಅದನ್ನೇ ಅಂತಿಮ ಎಂದು ಒಪ್ಪಲು ಸಿದ್ಧರಾಗಿರಲಿಲ್ಲ. ಆದ್ದರಿಂದಲೇ ಅವರು —

> “ಆ ತತ್ವವೊಂದನ್ನೇ ತಲೆಯ ಮೇಲೆ ಎತ್ತಿಕೊಂಡು ಕುಣಿಯುವುದು ಸನಾತನ ಧರ್ಮಕ್ಕೆ ವಿರುದ್ಧವಾದುದೆಂದೇ ನನ್ನ ಅಭಿಮತ”
>
> (ಕ.ವಿ., ಪುಟ: 134)

ಎಂದಿರುವುದು ಈ ಹಿನ್ನೆಲೆಯಲ್ಲಿ ಆಲೂರರು ಒಬ್ಬ ಉಗ್ರವಾದಿಯೇ ಸರಿ ಅನ್ನಿಸುತ್ತದೆ. “ಧರ್ಮರಾಷ್ಟ್ರ, ಧರ್ಮ ರಾಜ್ಯ” ಎನ್ನುವ ಆಲೂರರು

> “ಆಧ್ಯಾತ್ಮಿಕ ಏಕತೆಯೇ ಭಾರತದ ಮೂಲಭೂತ ಏಕತೆಯ ಮುಖ್ಯ ರಹಸ್ಯ”
>
> (ಕ.ವೈ. ಕಥೆ, ಪುಟ: 1)

ಎಂಬ ತಿಲಕರ ತಾತ್ತ್ವಿಕ ಚಿಂತನೆಗೆ ಹತ್ತಿರ ಆಗುತ್ತಾರೆ. ಇದಕ್ಕೆ ತಿಲಕ್, ರಾನಡೆ, ಗೋಖಲೆ, ವಿ.ಡಿ. ಸಾವರಕರ್ ಮೊದಲಾದವರ ಪ್ರಭಾವವೇ ಕಾರಣ. ಒಟ್ಟಿನಲ್ಲಿ ಆಲೂರರು ತಮ್ಮ ಕನ್ನಡ — ಕರ್ನಾಟಕತ್ವದ ಚಿಂತನೆಯನ್ನು ಧರ್ಮದ ಮುಖಾಂತರವೂ ಸಂಯೋಜಿಸುವುದು ಸ್ಪಷ್ಟ ಆಗುತ್ತದೆ. ಆ ಮೂಲಕವೇ ಪರಕೀಯ ಆಂಗ್ಲ ಆಡಳಿತವನ್ನು ಕೊನೆಗಾಣಿಸಲು ಸಾಧ್ಯ ಎಂದು ತಿಳಿದಿದ್ದ ಸನ್ನಿವೇಶ ಅದಾಗಿತ್ತು. ಆದ್ದರಿಂದಲೇ ಬಹುಪಾಲು ರಾಷ್ಟ್ರೀಯ ಹೋರಾಟಗಾರರು ಧರ್ಮದ ಪರಿಕರಗಳ ಚೌಕಟ್ಟಿಗೆ ಒಳಗಾಗುವುದು. ಇದಕ್ಕೆ ಆಲೂರರು ಹೊರತು ಅಲ್ಲ —

(ಚಂದ್ರಶೇಖರ್, ಎಸ್., ಸಿರಿಗನ್ನಡ, ಪುಟ: 80–81). ಅಂದಿನ ವಸಾಹತುಶಾಹಿಯ ವಿರೋಧಕ್ಕೆ ಆದು ಅನಿವಾರ್ಯ ನೆಪ ಅನ್ನಿಸಿದರೂ ಕೋಮುವಾದದ ಪ್ರಾರಂಭಿಕ ಬೇರುಗಳನ್ನು ಅಲ್ಲಿಂದಲೇ ಗುರುತಿಸಲು ಸಾಧ್ಯವಾಗುವುದು ಎಂದರೆ ತಪ್ಪಲ್ಲ. ಆಲೂರರಲ್ಲಿ ಹಿಂದುತ್ವದ ರೂಪವೇ ಏಕಮಾತ್ರ ಅಲ್ಲದಿದ್ದರೂ ಸಹ, ಅದನ್ನು ಅವರು ಮರೆಮಾಚಲು ಸಾಧ್ಯ ಆಗುತ್ತಿರಲಿಲ್ಲ ಎಂಬುದು ಸ್ಪಷ್ಟ ಆಗುತ್ತದೆ. ಬಹುಶಃ ಈ ಹಿನ್ನೆಲೆಯಿಂದಲೇ ಡಿ.ಆರ್. ನಾಗರಾಜ ಅವರು

> " ಕನ್ನಡ ರಾಷ್ಟ್ರೀಯತೆ ಮತ್ತು ಹಿಂದುತ್ವಗಳ ನಡುವಿನ ಸಂಬಂಧ ಅಪಾಯಕಾರಿ ನೆಲೆಗಳಿಗೆ ತಿರುಗುವುದನ್ನು ಆಲೂರರಲ್ಲೇ ಗುರುತಿಸಲು ಸಾಧ್ಯ. " ('ಕನ್ನಡ ರಾಷ್ಟ್ರೀಯತೆಯ ಸ್ವರೂಪ'ದ ಬಗ್ಗೆ ಮಂಡಿಸಿದ ಪ್ರಬಂಧದಿಂದ, 15.3.92)

— ಎಂದು ಅಭಿಪ್ರಾಯ ಪಟ್ಟಿದ್ದಾರೆ ಅನ್ನಿಸುತ್ತದೆ.

: : :

ಅಧ್ಯಾಯ : 4

## ಪತ್ರಿಕೋದ್ಯಮ ಮತ್ತು ಆಲೂರರು

ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಆಲೂರರು ಮೂರು ನೆಲೆಗಳಲ್ಲಿ ಕಾರ್ಯ ನಿರ್ವಹಿಸಿರುವುದು ಕಂಡುಬರುತ್ತದೆ. ಅವು,

1. ಅಂದು ಪ್ರಕಟ ಆಗುತ್ತಿದ್ದ ಪತ್ರಿಕೆಗಳಲ್ಲಿ ಲೇಖನ ಬರೆಯುವುದು
2. ಕೆಲವು ಪತ್ರಿಕೆಗಳಲ್ಲಿ ಅನಧಿಕೃತವಾಗಿ ಸಂಪಾದಕತ್ವವನ್ನು ನಿರ್ವಹಿಸುವುದು,

   ಹಾಗೂ
3. ತಾವೇ ಖುದ್ದಾಗಿ ಪತ್ರಿಕೆಗಳನ್ನು ಹೊರಡಿಸಿ ಸಂಪಾದಿಸಿರುವುದು

ಕನ್ನಡ — ಕರ್ನಾಟಕತ್ವಗಳನ್ನು ಕುರಿತ ಅವರ ಚಿಂತನೆಗೆ ಪತ್ರಿಕೋದ್ಯಮ ಸೂಕ್ತ ವೇದಿಕೆಯನ್ನು ನಿರ್ಮಿಸಿಕೊಟ್ಟಿತು.

ತಿಲಕರ ' ಕೇಸರಿ ' ಪತ್ರಿಕೆಯಿಂದ ಆಲೂರರು ಪ್ರಭಾವಿತರಾಗಿದ್ದರು. ಅದರಲ್ಲಿನ ಬರಹಗಳು ಸಾಮ್ರಾಜ್ಯಶಾಹಿಗೆ ತೀವ್ರವಾಗಿ ಪ್ರತಿಭಟಿಸುವಂತೆ ಇರುತ್ತಿದ್ದವು. ಅಲ್ಲದೆ ಅಂದಿನ ದೇಶೀ ಪತ್ರಿಕೆಗಳಲ್ಲಿ ಬಹುಪಾಲು ಪತ್ರಿಕೆಗಳು ಸ್ವಾತಂತ್ರ್ಯ ಪ್ರಜ್ಞೆಯನ್ನು ಮೂಡಿಸುವ ಆಶಯವನ್ನು ಇಟ್ಟುಕೊಂಡವು. ಬ್ರಿಟಿಷ್ ಅರಸರು ಭಾರತೀಯರನ್ನು ನಡೆಸಿಕೊಳ್ಳುತ್ತಿದ್ದ ತುಚ್ಛ ರೀತಿಯನ್ನು ತಿಲಕರಂತೆ ಕಟುವಾಗಿ ಟೀಕಿಸುವವರು ಯಾರೂ ಇರಲಿಲ್ಲ ಅನ್ನಿಸುತ್ತದೆ. ಮುಂಬಯಿ ಕನ್ನಡಿಗರು ಶುಕ್ರವಾರದ ' ಕೇಸರಿ ' ಗಾಗಿ ಕಾಯುವಂತೆ ಆಗಿತ್ತು. ಇಂಥ ಪ್ರಭಾವ ಆಲೂರರನ್ನು, ಅವರ ಚಿಂತನೆಯನ್ನು ಪತ್ರಿಕಾ ವಲಯಕ್ಕೆ ಕರೆದೊಯ್ದಿತು. ಅದೂ ಅಲ್ಲದೆ ಅಂದು ಕನ್ನಡ ಪ್ರಜ್ಞೆಯನ್ನು ಮೂಡಿಸಲು ಇದ್ದ ಪತ್ರಿಕೆಗಳು ಬಹಳ ಕಡಿಮೆ. ಕೆಲವು ಸಂಘ ಸಂಸ್ಥೆಗಳಿಂದಲೂ, ಮತ್ತೆ ಕೆಲವು ವ್ಯಕ್ತಿಗಳಿಂದಲೂ ಪ್ರಕಟ ಆಗುತ್ತಿದ್ದವು. ಅಂಥವುಗಳಲ್ಲಿ ' ವಾಗ್ಭೂಷಣ ', ' ಸದ್ಬೋಧ ಚಂದ್ರಿಕೆ ', ' ಆರೋಗ್ಯ ಚಂದ್ರಿಕೆ ', ' ಸುವಾಸಿನಿ ',

‘ಶ್ರೀಕೃಷ್ಣ ಸೂಕ್ತಿ’, ‘ಮಧುರವಾಣಿ’, ‘ಸಚಿತ್ರ ಭಾರತ’ ಇವು ಪ್ರಮುಖವಾದುವುಗಳು. ಆದರೆ ಇವು ನಿರ್ದಿಷ್ಟ ಪ್ರಾಂತ್ಯಗಳಿಗೆ ಮಾತ್ರ ಸೀಮಿತ. ಅಖಂಡ ಕರ್ನಾಟಕವನ್ನು ಪ್ರತಿನಿಧಿಸಿರಲಿಲ್ಲ. ಈ ನಿಟ್ಟಿನಲ್ಲಿ ಆಲೋಚನೆ ಮಾಡಿದವರು ಆಲೂರರು.

ಆಲೂರರು 1907ರ ಫೆಬ್ರುವರಿ ಸಂಚಿಕೆಯಿಂದ ‘ವಾಗ್ಭೂಷಣ’ ಪತ್ರಿಕೆಯ ಸಂಪಾದಕರಾದರು. ತಮ್ಮ ಮೊದಲ ಸಂಪಾದಕೀಯದಲ್ಲೇ ಕನ್ನಡ — ಕರ್ನಾಟಕತ್ವಗಳನ್ನು ಅಭಿವ್ಯಕ್ತಿಸಿದುದು ಹೆಚ್ಚು ಪ್ರಾಮುಖ್ಯತೆ ಪಡೆಯಿತು. ತಮ್ಮ ಕಲ್ಪನೆಯ ಕರ್ನಾಟಕದ ರೂಪ — ರೇಷೆಗಳ ಚಿತ್ರಣ ಅದರಲ್ಲಿತ್ತು. ಅಲ್ಲದೆ ಕರ್ನಾಟಕ ಏಕೀಕರಣದ ಅಗತ್ಯವನ್ನು ಹಾಗೂ ಅದರ ಸಾಧ್ಯತೆಯನ್ನು ಕನ್ನಡಿಗರಿಗೆ ಸ್ಪಷ್ಟಪಡಿಸುವುದು ಅವರ ಆಶಯ. ಡಿ.ವಿ. ಗುಂಡಪ್ಪ ಅವರ ‘ಕರ್ನಾಟಕ’ ಆಂಗ್ಲ ಪತ್ರಿಕೆಯಲ್ಲಿ ‘ಕನ್ನಡಿಗರ ಏಕೀಕರಣ’ ವನ್ನು ಕುರಿತ ಆಲೂರರ ಲೇಖನ ಮೈಸೂರಿಗರನ್ನು ಎಚ್ಚರಿಸಿತು. ಈ ಪ್ರಾಂತ್ಯಕ್ಕೆ ಕರ್ನಾಟಕತ್ವದ ಜಾಗೃತಿ ಮಾಡಿಸಿದ ಮೊದಲ ಲೇಖನ (2.4.1913) ಇದಾಗಿದೆ. ಇಂಥ ಲೇಖನಗಳು ಹಲವು ಪತ್ರಿಕೆಗಳಲ್ಲಿ ಹೆಚ್ಚೆಚ್ಚು ಪ್ರಕಟ ಆಗಲಿ ಎಂಬ ಆಲೂರರ ಚಿಂತನೆ ಪತ್ರಿಕೋದ್ಯಮದಲ್ಲಿ ಮುಖ್ಯವಾದುದು.



ದೇಶದಲ್ಲಿ ಅಸಹಕಾರ ಆಂದೋಲನ ತೀವ್ರವಾಗಿದ್ದ ಕಾಲ (1921) ಅದಾಗಿತ್ತು. ಧಾರವಾಡದಲ್ಲಿ ಅದರ ಕಾವು ಕಡಿಮೆ ಏನಿರಲಿಲ್ಲ. ಚಳುವಳಿ ನಡೆಸಿದ ಯುವಕನೊಬ್ಬನನ್ನು ಆರುತಿಂಗಳ ಶಿಕ್ಷೆಗೆ ಗುರಿಪಡಿಸಲಾಯಿತು. ಇದಕ್ಕೆ ವಿರೋಧವಾಗಿ ಅಂದಿನ ಸಂಜೆ (30.6.1921) ಪೊಲೀಸ್ ಠಾಣೆ ಎದುರು ಸುತ್ತುಗಟ್ಟಿದ್ದ ಜನರ ಮೇಲೆ ಗುಂಡು ಹಾರಿಸಿದ್ದರಿಂದ ಮೂವರು ಸಾವನ್ನಪ್ಪಿದರು. ಅನೇಕರು ಗಾಯಗೊಂಡರು. ಇಂಥ ಘಟನೆಯ ಸುದ್ದಿಯನ್ನು ಹರಡದಂತೆ ಮಾಡಲು ಸರಕಾರ ಕ್ರಮ ಕೈಗೊಂಡಿತು. ಎಲ್ಲ ಸಂಪಾದಕರುಗಳನ್ನು ಸೆರೆಮನೆಯಲ್ಲಿ ಇಡಲಾಯಿತು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಎಲ್ಲ ಪತ್ರಿಕೆಗಳನ್ನು ನಡೆಸುವ ಹಠ ತೊಟ್ಟ ಆಲೂರರ 'ರಾಜಹಂಸ', 'ವಿಜಯ', 'ಕರ್ಮವೀರ', 'ಕರ್ನಾಟಕ ವೃತ್ತ', 'ಕರ್ನಾಟಕ ಪತ್ರ', 'ಕನ್ನಡ ಕೇಸರಿ', 'ಲೋಕಬಂಧು', 'ಚಂದ್ರೋದಯ' ಮೊದಲಾದುವುಗಳನ್ನು ತಾವೇ ವಹಿಸಿಕೊಂಡರು. ಉಗ್ರವಾದ ಲೇಖನಗಳು, ಸಂಪಾದಕೀಯಗಳು ಪ್ರಕಟ ಆದುವು. ಅವರು ತಿಲಕರಷ್ಟೇ ತೀವ್ರವಾಗಿ ಬರೆದದ್ದು ಈ ಸಂದರ್ಭದಲ್ಲಿಯೆ.

ಧಾರವಾಡದ ಗೋಲಿಬಾರ್ ಪ್ರಕರಣವೊಂದನ್ನು ಕುರಿತು 'ಕರ್ಮವೀರ' ದಲ್ಲಿ ಬರೆದ (14.10.1921) ಅವರ ಲೇಖನ ಬ್ರಿಟಿಷರನ್ನು ತೀವ್ರವಾಗಿ ಖಂಡಿಸಿತು. 'ಭೂರಕ್ಷಸಾಯ ಸ್ವಾಃ' (ಬ್ಯೂರಾಕ್ರಾಸಿಯ ಸ್ವಾಹಾ) ಎಂಬ ಎರಡು ರೀತಿಯ ಅರ್ಥ ನೀಡುವ ಲೇಖನದಲ್ಲಿ ಆಲೂರರು,

> " ಬ್ರಿಟಿಷ ನ್ಯಾಯದೇವತೆಯು ಮಾತ್ರ ಧಾರವಾಡದಲ್ಲಿ ದಿಗಂಬರಳಾಗಿ ನಿಂತಳು, ... ಕರ್ನಾಟಕಸ್ಥರೇ ಏಳಿರಿ ನಿಮ್ಮೊಳಗಿನ ಪಾಪಗಳನ್ನೆಲ್ಲಾ ಸುಟ್ಟು ಬೂದಿ ಮಾಡಿ ಸ್ವರಾಜ್ಯ ದೇವತೆಯ ಆರಾಧನೆ ಮತ್ತೆ ಆರಂಭಿಸಿ. "

ಎಂದೆಲ್ಲಾ ಬರೆದಿದ್ದರು. ಇದರ ಪರಿಣಾಮವಾಗಿ ಪತ್ರಿಕೆಯ ಸಂಪಾದಕ (ರಂ.ರಾ. ದಿವಾಕರ) ಮತ್ತು ಪ್ರಕಾಶಕರು (ಹು. ರಾಮರಾವ್) ಸೆರೆಮನೆ ಸೇರಬೇಕಾಗಿ ಬಂತು. ಆದರೆ ಮೂಲತಃ ಅದನ್ನು ಬರೆದವರು ಆಲೂರರೆ. ಆಂಗ್ಲ ಅಧಿಕಾರಿ ಪೇಂಟರ್ (ಪೇಂಟಾಸುರ!)ನಿಗೆ ಇದು ತಿಳಿಯಲಿಲ್ಲ. ಅದೇ ರೀತಿಯಲ್ಲಿ 17.2.1922ರಲ್ಲಿ 'ಕರ್ಮವೀರ' ದಲ್ಲಿ ಇನ್ನೊಂದು ಲೇಖನ ಪ್ರಕಟ ಆಗಿತ್ತು. 'ಧೃತ — ರಾಷ್ಟ್ರರೆಲ್ಲರೂ (ಬ್ಯೂರಾಕ್ರಾಟ್ಸ) ಕುರುಡರೇ' ಎಂಬ ಈ ಲೇಖನದಲ್ಲಿ ಬ್ರಿಟಿಷ ನಿರಂಕುಶ ಪ್ರಭುತ್ವವನ್ನು ತೀವ್ರವಾಗಿ ಟೀಕಿಸಲಾಗಿತ್ತು. ಇಂಥ ಲೇಖನಗಳು ಕನ್ನಡಿಗರನ್ನು ಪರಕೀಯರ ಆಡಳಿತದ ವಿರುದ್ಧ ಆಲೋಚಿಸುವಂತೆ ಮಾಡಿದ್ದುವು. ಅಲ್ಲದೆ ಅಖಂಡ ಕರ್ನಾಟಕ ನಿರ್ಮಾಣದ ಆಶಯಕ್ಕೆ ಇದ್ದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಪ್ರಯತ್ನಗಳು ನಡೆದದ್ದು ಈ ಮೂಲಕವೇ.

ಕನ್ನಡ — ಕರ್ನಾಟಕತ್ವಗಳಿಗೆ ಎಲ್ಲ ವಿಭಜಿತ ಕನ್ನಡ ಪ್ರದೇಶಗಳು ಏಕರೀತಿಯಲ್ಲಿ ಪ್ರತಿಸ್ಪಂದಿಸುವುದು ಆಲೂರರಿಗೆ ಅತ್ಯಾವಶ್ಯಕವಾದ ಪ್ರತಿಕ್ರಿಯೆ ಎನಿಸಿತು. ಆದಕ್ಕಾಗಿ ಎಲ್ಲರನ್ನೂ ಪ್ರತಿನಿಧಿಸುವ ಒಂದು ಪತ್ರಿಕೆ ಅನಿವಾರ್ಯ ಆಗಿತ್ತು. ಆ ಕೊರತೆಯನ್ನು ತುಂಬಿದ್ದು ಆಲೂರರ 'ಜಯಕರ್ನಾಟಕ' ಮಾಸಪತ್ರಿಕೆ. ಇದು ಕನ್ನಡಿಗರ ಮುಖವಾಣಿ ಆಗಬೇಕು ಎಂಬುದು ಆಲೂರರ ಆಶಯ. ಇದರ ಭಾಷಾಶೈಲಿಯ ಸುಧಾರಣೆಗಿಂತಲೂ ಕರ್ನಾಟಕತ್ವದ ಜಾಗೃತಿ ಕನ್ನಡಿಗರಲ್ಲಿ ಆಗಬೇಕು ಎಂಬುದು ಈ ಪತ್ರಿಕೆಯಿಂದ ವ್ಯಕ್ತ ಆಗುತ್ತದೆ. 4.11.1922ರಂದು 'ಜಯ ಕರ್ನಾಟಕ' ಮಾಸಪತ್ರಿಕೆ ಪ್ರಕಟಗೊಂಡಿತು. ಇದರ ಬಡುಗಡೆ ಏತಕ್ಕೆ ಎಂಬುದನ್ನು ಕುರಿತು ಆಲೂರರು,

> " ಕರ್ನಾಟಕತ್ವದ ಜಾಗೃತಿ ಮತ್ತು ಸಂಸ್ಕೃತಿಯ ಜ್ಞಾನ, ಸರ್ವ ವಿಧದಲ್ಲಿ ಕರ್ನಾಟಕ ಏಕೀಕರಣ ಇವುಗಳನ್ನು ಮುಖ್ಯ ಧ್ಯೇಯಗಳನ್ನಾಗಿ ಇಟ್ಟುಕೊಂಡು ಅವುಗಳ ಪ್ರಸಾರಕ್ಕೆ ಯಾವುದೊಂದು ಸಾಧನವಿರಬೇಕೆಂಬ ಉದ್ದೇಶದಿಂದ ಜಯಕರ್ನಾಟಕ ಮಾಸಪತ್ರಿಕೆಯನ್ನು ಹೊರಡಿಸಿದ್ದು "

— ಎಂದು ಅಭಿಪ್ರಾಯಪಟ್ಟಿದ್ದಾರೆ. ಆರು ವರ್ಷಗಳ ತಮ್ಮ ಸಂಪಾದಕತ್ವದಲ್ಲಿ (1922–28) ಎಲ್ಲ ವಿಭಜಿತ ಐದು ಭಾಗಗಳವರನ್ನು ಎಚ್ಚರಿಸುವ ಪ್ರಯತ್ನ ಮಾಡಿದರು. ಅವರ ಬರಹಗಳಲ್ಲಿ ಕರ್ನಾಟಕತ್ವದ ಕಳಕಳಿ ವ್ಯಕ್ತ ಆಗಿದೆ. ಯಾವುದೇ ಭೇದಭಾವಗಳನ್ನು ತೋರದೆ ಎಲ್ಲ ರೀತಿಯ ಲೇಖನಗಳನ್ನು ಪ್ರಕಟಿಸಿದರು. ಎಲ್ಲರಿಗೂ ಆದ್ಯತೆ ಇತ್ತರು. ಅವರಿಗೆ ಪತ್ರಿಕೆ ಹಾಗೂ ಅದರ ಭಾಷಾ ಸುಧಾರಣೆಗಿಂತ ಕನ್ನಡಿಗರಲ್ಲಿ ಎಚ್ಚರಿಕೆಯ ಪ್ರಜ್ಞೆ ಮುಖ್ಯ ಆಗಿತ್ತು.

'ಜಯಕರ್ನಾಟಕ' ದಿಂದ ಬೆಳಕಿಗೆ ಬಂದವರು ಅನೇಕ. ಇಂದು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಸ್ಥಾನವನ್ನು ಅಲಂಕರಿಸಿರುವ ಬೇಂದ್ರೆ, ಕುವೆಂಪು, ತೀ.ತಾ. ಶರ್ಮ, ಮುದವೀಡು ಕೃಷ್ಣಶರ್ಮ, ಶಂ.ಬಾ. ಜೋಶಿ, ಗೋಕಾಕ್, ಮುಗಳಿ, ಬೆನಗಲ ರಾಮರಾವ್, ಮಧುರಚೆನ್ನ, ಸಿಂಪಿ ಲಿಂಗಣ್ಣ, ಹಳಕಟ್ಟಿ, ರಾಜರತ್ನಂ, ಬೇಲೂರ ಕೇಶವ, ಕೃಷ್ಣಕುಮಾರ ಕಲ್ಲೂರ, ಡಿ.ಕೆ. ಭಾರದ್ವಾಜ, ದೇಗಾಂವಿ ಕಮಲಾಂಬೆ, ತಿರುಮಲೆ ರಾಜಮ್ಮ, ಸಾಲಿ ರಾಮಚಂದ್ರರಾವ್, ಆರ್. ಕಲ್ಯಾಣಮ್ಮ, ಆಶಾಬಾಯಿ ದಾತಾರ, ಸಿದ್ಧರಾಮಪ್ಪ ಪಾವಟೆ ಮೊದಲಾದವರನ್ನು ಈ ಪತ್ರಿಕೆ ಪರಿಚಯಿಸಿದೆ. ಕನ್ನಡಿಗರ ಧ್ವನಿ ಆಗಿದ್ದ 'ಜಯಕರ್ನಾಟಕ' ರಾಷ್ಟ್ರೀಯತ್ವಕ್ಕೂ, ಕರ್ನಾಟಕತ್ವಕ್ಕೂ ಸರಿಸಮಾನವಾಗಿ ಕನ್ನಡಿಗರನ್ನು ಸಜ್ಜುಗೊಳಿಸಿತು. ಅಂದು ರಮಾನಂದ ಚಟರ್ಜಿ ಅವರ 'ಮಾಡರ್ನ್ ರಿವ್ಯೂ' ಪತ್ರಿಕೆ ಭಾರತೀಯ ಪತ್ರಿಕೆಗಳಲ್ಲೇ ಹೆಚ್ಚು ಆದರ್ಶಪ್ರಾಯವಾದುದು. ಅದಕ್ಕೆ ಸರಿಸಮನಾಗಿ ಆಲೂರರ 'ಜಯಕರ್ನಾಟಕ', 'ಕನ್ನಡದ ಮಾಡರ್ನ್ ರಿವ್ಯೂ' ಎಂದೇ ಪ್ರಖ್ಯಾತಿ ಪಡೆಯಿತು. ಇದರ ಶ್ರೇಯಸ್ಸಿಗೆ ಆಲೂರರಲ್ಲಿದ್ದ ಕನ್ನಡದ ಬಗೆಗಿನ ಅಭಿಮಾನ, ಪರಿಶ್ರಮಗಳೇ ಕಾರಣ. ಕನ್ನಡಿಗರನ್ನು ಜಾಗೃತಗೊಳಿಸಲು ಅಂದಿನ ಬಹುಪಾಲು ಪತ್ರಿಕೆಗಳು ಶ್ರಮಿಸಲು ಆರಂಭಿಸಿದ್ದು ಆಲೂರರ ಕನ್ನಡ — ಕರ್ನಾಟಕತ್ವದ ವಿಚಾರಗಳ ಪ್ರಭಾವದಿಂದಲೇ.

: : :

ಅಧ್ಯಾಯ : 5

## ಆಲೂರರ ಸಾಹಿತ್ಯ ಚಿಂತನೆಯಲ್ಲಿ ಕನ್ನಡ — ಕರ್ನಾಟಕತ್ವಗಳು

ಆಲೂರ ವೆಂಕಟರಾಯರು ಅಖಂಡ ಕರ್ನಾಟಕ ನಿರ್ಮಾಣದ ಉದ್ದೇಶಕ್ಕೆ ತಮ್ಮ ಸಾಹಿತ್ಯದ ಮೂಲಕ ಜಾಗೃತಿಯನ್ನು ಮೂಡಿಸಿದವರು. ಅಂದು ನಾಡು — ನುಡಿ, ಇತಿಹಾಸ, ಸಾಹಿತ್ಯ, ಕಲೆ, ಸಂಸ್ಕೃತಿಗಳ ಬಗೆಗೆ ಕನ್ನಡಿಗರಲ್ಲಿದ್ದ ಅಜ್ಞಾನವನ್ನು ಹೋಗಲಾಡಿಸಲು ಬಹಳಷ್ಟು ಶ್ರಮ ಪಡಬೇಕಾಯಿತು.

> " ನಮ್ಮ ಕರ್ನಾಟಕದ ವಿಷಯಕ್ಕೆ ಅಭಿಮಾನಪಡತಕ್ಕ ಸಂಗತಿಗಳೇನಿವೆ? ನಮ್ಮದೇನು ರಾಷ್ಟ್ರವೇ? ನಮಗೇನು ಇತಿಹಾಸವಿದೆಯೇ? ಕರ್ನಾಟಕವು ಸಾಮ್ರಾಜ್ಯವನ್ನು ಕಂಡಿತ್ತೋ? ಕನ್ನಡ ನಾಡು ಮೃತ ರಾಷ್ಟ್ರವೋ, ಜೀವಂತ ರಾಷ್ಟ್ರವೋ? . . . "
>
> (ಕ.ಗ., ಪುಟ: 23)

ಎಂಬೆಲ್ಲಾ ಪ್ರಶ್ನೆಗಳಿಗೆ ಆಲೂರರು ಉತ್ತರಗಳನ್ನು ಹುಡುಕಬೇಕಿತ್ತು. ಆಗ ಇತಿಹಾಸಕ್ಕೆ ಮೊರೆಹೋದ ಆಲೂರರು ಅದನ್ನೇ ಕರ್ನಾಟಕತ್ವದ ಮಾಧ್ಯಮವನ್ನಾಗಿ ಬಳಸಿದರು. ತಾವು 'ಸಾಹಿತಿಯೂ ಅಲ್ಲ; ಇತಿಹಾಸಕಾರನೂ ಅಲ್ಲ' ಎಂದು ಹೇಳಿಕೊಳ್ಳುವುದರ ಜೊತೆ ಜೊತೆಗೆ ಅವೆರಡೂ ಆಗಿದ್ದರು. ಅವರ ಸಾಹಿತ್ಯದಲ್ಲಿ ಈ ಎರಡೂ ಜ್ಞಾನ ಶಿಸ್ತುಗಳ (ಅಂತರ್ ಶಿಸ್ತೀಯ) ಮುಖ್ಯ ಅಂಶಗಳನ್ನು ಗಮನಿಸಬಹುದು.

ಆಲೂರರು ಭಾರತೀಯ ದೃಷ್ಟಿಯಲ್ಲೇ ಇತಿಹಾಸವನ್ನು ಅರ್ಥಮಾಡಿಕೊಂಡಿದ್ದರು. ಅಂದರೆ ಅವರಿಗೆ ತೇದಿ, ಸಮಯಗಳಿಗಿಂತಲೂ ಆಗಿಹೋದ ಘಟನೆ, ವ್ಯಕ್ತಿಗಳು ಮುಖ್ಯ ಎನಿಸಿತು. ಆ ಮೂಲಕ ಅಂದಿನ ವೀರ — ಶೂರತ್ವಗಳನ್ನು, ತ್ಯಾಗ — ಬಲಿದಾನಗಳನ್ನು ಮನಮುಟ್ಟುವಂತೆ ಮಾಡಿ ಪ್ರೇರೇಪಿಸುವುದು ಅವರ ನಿಲುವು. ಇಂತಹ ಪ್ರೇರೇಪಣೆಯಿಂದ ಮಾತ್ರ ವಸಾಹತುಶಾಹಿ ಹಿಡಿತದಿಂದ ಮುಕ್ತರಾಗಲು ಬೇಕಾದ ರಾಜಕೀಯ ಮತ್ತು ಸಾಂಸ್ಕೃತಿಕ ಐಕ್ಯತೆಯ ಪ್ರಜ್ಞೆ

ಯನ್ನು ಪಡೆಯಲು ಸಾಧ್ಯ ಎಂದು ನಂಬಿದ್ದರು.

ಕನ್ನಡಿಗರ ಸಾಧನೆಯನ್ನು ಹೇಳಿ ಅವರಲ್ಲಿ ಹೆಮ್ಮೆ ಮೂಡಿಸಲು ಮರಾಠಿ ಮೋಹ ವನ್ನು ತಡೆಯಲು 'ಕನ್ನಡಿಗರ ಭ್ರಮನಿರಸನ' (1913) ಎಂಬ ಚಿಕ್ಕ ನಾಟಕವನ್ನು ಬರೆದರು. ನರಗುಂದಕರ ರಾಮರಾಯರೊಂದಿಗೆ ಬರೆದ ಈ ನಾಟಕ ಶಾಲಾ — ಕಾಲೇಜುಗಳಲ್ಲಿ ಅಭಿ ನಯಿಸಲ್ಪಟ್ಟು ಕನ್ನಡ — ಕರ್ನಾಟಕತ್ವದ ಅಭಿಮಾನವನ್ನು ಮೂಡಿಸಿತು. ವಿದ್ಯಾರ್ಥಿ ಜೀವನ ದಿಂದಲೇ ಕನ್ನಡ — ಕರ್ನಾಟಕದ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುವಂತೆ ಮಾಡುವ ಆಶಯವನ್ನು ಈ ನಾಟಕ ಅಭಿವ್ಯಕ್ತಿಸುತ್ತದೆ.

ಕರ್ನಾಟಕದ 'ವೈಭವಯುತ ಸಂಸ್ಕೃತಿ'ಯನ್ನು ಕನ್ನಡಿಗರು ಪರಕೀಯ ಒತ್ತಡಗಳಿಂ ದಾಗಿ ಮರೆತಿದ್ದಾರೆ; ಮತ್ತೆ ಅದನ್ನು ಅವರಲ್ಲಿ ಒಡಮೂಡುವಂತೆ ನೆನಪಿಸ (ಎಚ್ಚರಿಸ) ಬೇಕೆಂದು ಆಲೂರರು ಅಭಿಪ್ರಾಯಪಟ್ಟಿದ್ದರು. ಕರ್ನಾಟಕದ ಗತ ಇತಿಹಾಸವನ್ನು ಹೇಳಿ ಕನ್ನಡಿಗರನ್ನು ಕೆರಳಿಸುವುದೇ ಅವರ ನಿಲುವು ಆಗಿತ್ತು. ಆ ಕೆರಳಿಕೆಯಿಂದ ಅಖಂಡ ಕರ್ನಾಟಕದ ನಿರ್ಮಾಣ ಆಗು ತ್ತದೆ ಎಂದು ಅರಿತಿದ್ದರು. ಅವರು ಈ ಹಿನ್ನೆಲೆಯಲ್ಲಿಯೇ ಕರ್ನಾಟಕ ಸಿಂಹಾಸನ ಸ್ಥಾಪನಾ ಚಾರ್ಯ ಶ್ರೀ ವಿದ್ಯಾರಣ್ಯ (1909), ಕರ್ನಾಟಕ ಗತವೈಭವ (1917), ಕರ್ನಾಟಕ ವೀರರತ್ನ ಗಳು (1930) ಹಾಗೂ ಕರ್ನಾಟಕತ್ವದ ಸೂತ್ರಗಳು (1950) ಎಂಬ ಕೃತಿಗಳನ್ನು ಬರೆದರು.

ಶ್ರೀ ವಿದ್ಯಾರಣ್ಯ ಚರಿತೆ (1909):

ಆಲೂರರೇ ಹೇಳಿಕೊಂಡಿರುವಂತೆ 'ಶ್ರೀ ವಿದ್ಯಾರಣ್ಯ ಚರಿತೆ'ಯು ಚಿಕ್ಕದಾದರೂ ಕರ್ನಾಟಕತ್ವವನ್ನು ಮೂಡಿಸುವಲ್ಲಿ ಹೆಚ್ಚು ಪರಿಣಾಮಕಾರಿ ಆದ ಮೊದಲ ಕೃತಿ ಎನಿಸಿದೆ. ವಿದ್ಯಾರಣ್ಯರ ಬಗೆಗೆ ಆಲೂರರಿಗೆ ಉತ್ಕಟವಾದ ಅಭಿಮಾನ. ಆ ಅಭಿಮಾನಕ್ಕೆ ಅವರ ಆಧ್ಯಾತ್ಮಿಕ ಮನೋಭಾವ ಹಾಗೂ ಸಂಪ್ರದಾಯವಾದಿ ನಿಲುವುಗಳು ಕಾರಣ ಆಗಿರಬಹುದು. ಅಲ್ಲದೆ ವಿದ್ಯಾರಣ್ಯರು ಹಕ್ಕ — ಬುಕ್ಕರಲ್ಲಿ ಸ್ಫೂರ್ತಿ ತುಂಬಿ 'ಧರ್ಮ ಸಾಮ್ರಾಜ್ಯ'ವನ್ನು ಕಟ್ಟಿಸಿ ದುದು ಅವರನ್ನು ಪ್ರಭಾವಿತರನ್ನಾಗಿಸಿರಬಹುದು. ಪರಕೀಯರನ್ನು, ಪರಧರ್ಮೀಯರನ್ನು ಹೊಡೆದೋಡಿಸಲು ಕಾರಣರಾದ ಶ್ರೀ ವಿದ್ಯಾರಣ್ಯರು ಕರ್ನಾಟಕದ ಸಿಂಹಾಸನವನ್ನು (ವಿಜಯ ನಗರ ಸಾಮ್ರಾಜ್ಯವನ್ನು) ಸ್ಥಾಪಿಸಿದುದು ಆಲೂರರಿಗೆ ಅವರ ಸಂದರ್ಭದಲ್ಲಿಯೇ ಇದ್ದ

ಬ್ರಿಟಿಷರ ಬಗೆಗೆ ವಿರೋಧವನ್ನು ವ್ಯಕ್ತಪಡಿಸಲು ಸ್ಫೂರ್ತಿ ತುಂಬಿತು. ಅದೇ ಸ್ಫೂರ್ತಿಯನ್ನು ಕನ್ನಡಿಗರಲ್ಲಿ ಮತ್ತೆ ಒಡಮೂಡಿಸಲು ಈ ಕೃತಿ ಪ್ರಯತ್ನಿಸಿದೆ. ವಿಲಕ್ಷಣವಾದ ಸ್ಫೂರ್ತಿ ಮತ್ತು ಕರ್ನಾಟಕತ್ವವನ್ನು ತುಂಬಿದ ಈ ಕೃತಿ ಅವರನ್ನು ಮುಂದೆ ವಿದ್ಯಾರಣ್ಯರ ಉತ್ಸವ' ವನ್ನು ರಾಷ್ಟ್ರೀಯ ಉತ್ಸವವನ್ನಾಗಿ ಆಚರಿಸಲು ಪ್ರೇರೇಪಣೆ ನೀಡಿತು. 'ಯತ್ರ ಯೋಗೀಶ್ವರಃ ಕೃಷ್ಣಃ...' ಎಂಬ ಗೀತಾವಾಕ್ಯ ಹಾಗೂ ಧಾರ್ಮಿಕ ಹಿನ್ನೆಲೆಯ ಉದಾಹರಣೆಗಳು ಸಾಕಷ್ಟು ಪ್ರಚೋದಕಳಾಗಿ ಪರಿಣಾಮ ಬೀರಿದವು. ವಿದ್ಯಾರಣ್ಯರ ಕಾಲದ ಪರಧರ್ಮೀಯರ ಬಗೆಗೆ ಮಾತನಾಡುವಾಗ ಆಲೂರರಿಗೆ ಅವರ ಸಂದರ್ಭದಲ್ಲಿದ್ದ ಪರಧರ್ಮೀಯರ ಬಗೆಗೆ ಸಮಷ್ಟಿಯ ದೃಷ್ಟಿ ಇದ್ದಿತು. ಹಾಗೆಯೇ ಬ್ರಿಟಿಷಶಾಹಿ ವಿರುದ್ಧ ಪ್ರಬಲ ವಿರೋಧವೂ ಇತ್ತು.

ಕರ್ನಾಟಕ ಗತವೈಭವ (1917):

ಆಲೂರರ 'ಕರ್ನಾಟಕ ಗತವೈಭವ' (1917) ಕನ್ನಡ — ಕರ್ನಾಟಕತ್ವವನ್ನು ಪ್ರತಿಪಾದಿಸಿದ ಮೇರುಕೃತಿ. ಈ ಕೃತಿಯಿಂದಲೇ ಕನ್ನಡಿಗರು ಕರ್ನಾಟಕ ಏಕೀಕರಣದ ಬಗೆಗೆ ಯೋಚಿಸುವಂತೆ ಆಯಿತು ಎನ್ನಬಹುದು. ಇದು ಪ್ರಕಟ ಆಗುವುದಕ್ಕೆ ಮೊದಲು ಕೆಲವೇ ಆಂಗ್ಲಪುಸ್ತಕಗಳು ಕರ್ನಾಟಕದ ಬಗೆಗಿನ ಉಲ್ಲೇಖಗಳನ್ನು ಕೊಟ್ಟಿದ್ದವು. ಆದರೆ ಆಲೂರರ ಸಂಶೋಧನೆಯ ಫಲದಿಂದ 'ಕರ್ನಾಟಕದ ಇತಿಹಾಸ' ವನ್ನು ಕನ್ನಡದಲ್ಲಿ ಪ್ರಪ್ರಥಮ ಬಾರಿಗೆ ಕನ್ನಡಿಗರು ತಿಳಿದುಕೊಳ್ಳಲು ಸಾಧ್ಯವಾಯಿತು. ಕರ್ನಾಟಕ ಏಕೀಕರಣದ ದೃಷ್ಟಿಯಲ್ಲಿ ಹಾಗೂ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಈ ಕೃತಿ ಹೆಚ್ಚಿನ ಮಹತ್ವ ಪಡೆದಿದೆ. ಕರ್ನಾಟಕತ್ವದ ಜಾಗೃತಿಗೆ ಇತಿಹಾಸ ಒಳ್ಳೆಯ ಮಾಧ್ಯಮವೆಂದು ತಿಳಿದಿದ್ದ ಆಲೂರರು ಕರ್ನಾಟಕದ ಸಂಸ್ಕೃತಿಯಲ್ಲಿನ 'ವೈಭವವನ್ನು ಅರಿಯಲು ಇನ್ನೂ ಹೆಚ್ಚಿನ ಸಂಶೋಧನೆಗಳು ಆಗಬೇಕೆಂದು ತಿಳಿದಿದ್ದರು. ಆದುದರಿಂದಲೇ ಅವರು 'ಈ ಪ್ರಬಂಧವು ಕರ್ನಾಟಕ ಇತಿಹಾಸದೇವಿಯ ಮಂದಿರಕ್ಕೆ ಹೋಗುವ ದಾರಿಯನ್ನು ತೋರಿಸುವ ಕೈಕಂಬವು. ಆ ಮಂದಿರದೊಳಗೆ ಪ್ರವೇಶಿಸತಕ್ಕ ಮಹಾದ್ವಾರವನ್ನು ತೆರೆಯುವ ಕೆಲಸವು ಮುಂದಿನ ಇತಿಹಾಸ ಸಂಶೋಧಕರದು...' (ಕ.ಗ., ಪುಟ: 13) ಎಂದು ಹೇಳಿ ಸ್ಫೂರ್ತಿ ತುಂಬುತ್ತಾರೆ.

ಗತವೈಭವದಲ್ಲಿ ವಿಷಯ, ಕ್ರಮ ಮತ್ತು ಸಂಯೋಜನೆಗಳು ಚಾರಿತ್ರಿಕ ಸ್ವರೂಪವನ್ನು ಪಡೆದಿದ್ದರೆ, ಅದೇ ರೀತಿ ಅವುಗಳ ವಿಶ್ಲೇಷಣೆ ಸಾಹಿತ್ಯಕ ಸ್ವರೂಪ ಪಡೆದಿರುವುದನ್ನು ಪರಿಶೀಲಿಸಬಹುದು. ಇದರ ಶೈಲಿಯನ್ನು ಕುರಿತು ರಂ.ಶ್ರೀ. ಮುಗಳಿ ಅವರು 'ಇದರ ಶೈಲಿ ಹೊಸಗನ್ನಡ ಹೊಸತಿಲಲ್ಲಿ ಹಚ್ಚಿಟ್ಟ ಒಂದು ವಿಶೇಷವಾದ ದೀವಿಗೆ' (ವಿ.ಪ್ರ., ಪುಟ: 44) ಎನ್ನುತ್ತಾರೆ.

ಕರ್ನಾಟಕದ ಬಗೆಗೆ ಅಭಿಮಾನ ಮೂಡಿಸಲು ತಮ್ಮದೇ ಆದ ವಿಶಿಷ್ಟ ಶೈಲಿಯನ್ನು ಬಳಸುವ ಆಲೂರರು —

> " ಕನ್ನಡಿಗರೇ ನಾವು ನಿಮ್ಮ ಕೈಯಲ್ಲಿ ಕಡ್ಡಿಕೊಟ್ಟು ಸಾರಿ ದೂರಿ ಹೇಳುವುದೇನೆಂದರೆ ನಮ್ಮ ಕರ್ನಾಟಕವು ಮೃತ ರಾಷ್ಟ್ರವಲ್ಲ. ಅದು ಜೀವಂತ ರಾಷ್ಟ್ರವು ಅಷ್ಟೇ ಏಕೆ ಅದೊಂದು ಪ್ರತಿಭಾ ಸಂಪನ್ನವಾದ ರಾಷ್ಟ್ರವು... ಸಾವಿರಾರು ವರ್ಷಗಳವರೆಗೆ ತನ್ನ ಘನತೆಯನ್ನು ಕಾಪಾಡಿಕೊಂಡಿದೆ... ಅದು ಸ್ವಭಾವ ಚೈತನ್ಯವಾದ ರಾಷ್ಟ್ರವು ಕಾಲಾನುಸಾರವಾಗಿ ಅದು ಮೇಲು — ಕೀಳು ಸ್ಥಿತಿಗೀಡಾಗಿರಬಹುದು. ಆದರೆ ಅದರಲ್ಲಿರುವ ಚೈತನ್ಯ ಶಕ್ತಿಯು ಮಾತ್ರ ಯಾವ ಕೃತ್ರಿಮೋಪಾಯದಿಂದಲೂ ಕುಂದಲಾರದು... ಆದದ್ದಾಯಿತು! ಈಗಲಾದರೂ ಕಣ್ತೆರೆದು ನಾವು ನಮ್ಮ ಕರ್ನಾಟಕತ್ವವನ್ನು ಅರಿತು ನಮ್ಮ ಮುಂದಿನ ಮಾರ್ಗವನ್ನು ತಿದ್ದಿಕೊಂಡರೆ ಜಗತ್ತಿನಲ್ಲಿ ನಗೆಗೀಡಾಗದೆ ನಮ್ಮ ಮಾನವನ್ನು ನಾವು ಕಾಯ್ದುಕೊಂಡಂತಾಗುವುದು... ಇದೀಗ ನಮ್ಮೆಲ್ಲರ ಶ್ರೇಷ್ಠವಾದ ಕರ್ತವ್ಯವು... ಏಳೈ ಕನ್ನಡಿಗರೇ! ನೀವು ಕರ್ನಾಟಕಾಭಿಮಾನ ದೇವತೆಯನ್ನು ಪ್ರಸನ್ನೀಕರಿಸಿಕೊಂಡು, ಅವಳ ಅಮರತ್ವವನ್ನು ಜ್ಞಾನ ದೃಷ್ಟಿಯಿಂದ ಕಂಡುಹಿಡಿದು ಅವಳ ಇತಿಹಾಸವನ್ನು ಆದ್ಯಂತವಾಗಿ ಪರಿಶೀಲಿಸಿ ಕನ್ನಡಿಗರೆಂಬ ನಿಮ್ಮ ಹೆಸರನ್ನು ಸಾರ್ಥಕಪಡಿಸಿಕೊಳ್ಳಿರಿ "
>
> (ಕ.ಗ. ಪುಟ: 27—30)

ಎಂಬುದಾಗಿ ಎಚ್ಚರಿಸುವುದರ ಮೂಲಕ ಕರ್ನಾಟಕದ ಗತಚರಿತ್ರೆ ಮತ್ತು ವೈಭವದೆಡೆಗೆ ಗಮನ ಸೆಳೆಯುತ್ತಾರೆ.

ಕವಿರಾಜಮಾರ್ಗಕಾರನು ಗುರುತಿಸುವ ಗೋದಾವರಿವರೆಗಿನ ನಾಡಿನ ವಿಸ್ತಾರವನ್ನು ಆಲೂರರು ನರ್ಮದೆಯವರೆಗೂ ವಿಸ್ತರಿಸುತ್ತಾರೆ. ಅಲ್ಲದೆ ತಮಗೆ ದೊರೆತ ಸಾಕ್ಷಿ — ಆಧಾರಗಳ

ಮೂಲಕ ಆಂಧ್ರ ಮತ್ತು ಮಹಾರಾಷ್ಟ್ರಗಳಲ್ಲಿನ ಹಲವು ಪ್ರದೇಶಗಳನ್ನು ಪಟ್ಟಿ ಮಾಡಿ ಅವು ಕನ್ನಡ ಮಾತನಾಡುತ್ತಿದ್ದ ಪ್ರದೇಶಗಳೇ ಆಗಿವೆ ಎನ್ನುತ್ತಾರೆ. ಆಶ್ಚರ್ಯದ ಮತ್ತೊಂದು ವಿಷಯವೆಂದರೆ ಮಹಾರಾಷ್ಟ್ರೀಯರು ಪ್ರಾರಂಭದಲ್ಲಿ ಕನ್ನಡ ಮಾತನಾಡುವವರೂ ಹಾಗೂ ಕರ್ನಾಟಕಕ್ಕೆ ಸೇರಿದವರೂ ಆಗಿದ್ದರು ಎಂಬ ಅವರ ವಾದ. ಅನಂತರ ರಾಜವಾಡೆ, ಶಂ.ಬಾ. ಜೋಶಿಯಂಥ ವಿದ್ವಾಂಸರು ನಡೆಸಿದ ಸಂಶೋಧನೆಗಳಲ್ಲಿ ಆಲೂರರು ಹೇಳಿದ ವಿಚಾರಗಳು ದೃಢಪಟ್ಟಿವೆ.

ಆಲೂರ ವೆಂಕಟರಾಯರು ಕರ್ನಾಟಕದ ಚರಿತ್ರೆಯಲ್ಲಿನ ಪುಲಕೇಶಿ, ನೃಪತುಂಗ, ಗೋವಿಂದ, ತೈಲಪ, ಹಕ್ಕ-ಬುಕ್ಕ ಮೊದಲಾದವರನ್ನು ಕುರಿತು ಕನ್ನಡಿಗರಲ್ಲಿ ಅಭಿಮಾನ ಮೂಡಿಸಲು “ ಅವರೆಲ್ಲರೂ ಶುದ್ಧ ಕನ್ನಡಿಗರೇ! ಅವರು ನಮ್ಮಂತೆಯೇ ಕನ್ನಡ ನುಡಿಯನ್ನೇ ಆಡುತ್ತಿದ್ದರು! ಈ ಕರ್ನಾಟಕವೇ ಅವರ ಜನ್ಮಭೂಮಿ! ” (ಕ.ಗ., ಪುಟ: 44) ಎಂಬುದಾಗಿ ಒತ್ತುಕೊಟ್ಟು ಹೇಳಿದ್ದಾರೆ. ಅಲ್ಲದೆ ಕರ್ನಾಟಕದಲ್ಲಿ ಆಗಿಹೋದ ವಚನಕಾರರ, ದಾಸರ, ಧಾರ್ಮಿಕ ಪಂಥಗಳ, ಯತಿ — ಮುನಿಗಳ, ರಾಜ — ರಾಣಿಯರ, ಅಂದಿನ ಸಾಹಿತ್ಯದ, ಗುಡಿ — ಗೋಪುರಗಳ ಕಲಾಸಂಪನ್ನತೆಯ ಬಗೆಗೆ ಕನ್ನಡಿಗರು ಅಭಿಮಾನ ಪಡುವ ರೀತಿಯಲ್ಲಿ 'ಗತವೈಭವವನ್ನು ಸೃಷ್ಟಿಸಿದರು.

ಅಂದು ತಮಗೆ ದೊರೆತ ಸಾಕ್ಷಿ — ಆಧಾರಗಳನ್ನು ಇಟ್ಟುಕೊಂಡು ಆಲೂರರು ಕೆಲವು ವಿಚಾರಗಳನ್ನು 'ಗತವೈಭವದಲ್ಲಿ ಹೇಳಿದ್ದಾರೆ. ಆದರೆ ಇಂದು ಸಾಕಷ್ಟು ಸಂಶೋಧನೆಗಳಾಗಿ ಹೊಸ ವಿಚಾರಗಳು ಬೆಳಕಿಗೆ ಬಂದಿವೆ. ಅವರು ಕರ್ನಾಟಕದ ಬಗೆಗಿನ ಅತಿ ಅಭಿಮಾನದಿಂದ ಇತಿಹಾಸದ ಎಲ್ಲೆಗಳನ್ನೇ (ಚೌಕಟ್ಟನ್ನು) ಮೀರಿ ಕೆಲವು ವಿಚಾರಗಳನ್ನು ಪ್ರಸ್ತಾಪಿಸುತ್ತಾರೆ ಅನ್ನಿಸುತ್ತದೆ. ಯಾವುದೇ ಟೀಕೆಗಳಿದ್ದರೂ ಕರ್ನಾಟಕತ್ವದ ಜಾಗೃತಿಗೆ ಗತವೈಭವವು ಹೆಚ್ಚಿನ ಮಟ್ಟಿಗೆ ಕಾರಣವಾಗಿದೆ. ಈ ಕೃತಿಯನ್ನು ಉತ್ತರ ಕರ್ನಾಟಕದಲ್ಲಿ ಪಾರಾಯಣ ಮಾಡುತ್ತಿದ್ದರೆಂಬ ವಿಚಾರ ಅದರ ಮಹತ್ವವನ್ನು ಹೇಳುತ್ತದೆ. ಅಲ್ಲದೆ ಓದು ಬರುವವರು ಓದು ಬಾರದವರಿಗೆ ಓದಿ ಹೇಳುವುದರ ಮೂಲಕ ಕರ್ನಾಟಕದ ಅಭಿಮಾನವನ್ನು ಮೂಡಿಸಿರುವ ಉದಾಹರಣೆಗಳಿವೆ. ಬೇಂದ್ರೆ ಅವರು 'ಏಳು ಶೂರರ ಕಣ' ಕವನದಲ್ಲಿ ಹೇಳಿರುವಂತೆ —

" ಸತ್ತವರು ಎದೆ ನೇರು, ಸುತ್ತಿರುವ ವಿಷಹೀರು
ಸತ್ತುಳ್ಳ ನೂರಾರುಗಳ ಬತ್ತುಗಳ ತೂರು "

ಎಂಬ 'ಯುಗಪ್ರವರ್ತಕ ಕಾರ್ಯವನ್ನು 'ಗತವೈಭವ' ಮಾಡಿತು. ಆತ್ಮ ಸ್ವರೂಪ, ಜ್ಞಾನ ಹಾಗೂ ಅಭಿಮಾನ ಇವು ನಷ್ಟವಾಗಿರುವ ಜನಕ್ಕೆ ಅದು ಮತ್ತೆ ಜಾಗೃತಗೊಳ್ಳುವಂತೆ ಮಾಡಿತು. ಆಲೂರರು ತಮ್ಮ 'ಗತವೈಭವ' ಕೃತಿಯನ್ನು 'ಭಗವದ್ಗೀತೆ' ಗೆ ಹೋಲಿಸಿಕೊಳ್ಳುವುದರ ಮೂಲಕ ಕನ್ನಡ — ಕರ್ನಾಟಕದ ಕಾಂತರ್ಯ ಚಟುವಟಿಕೆಗಳ ಕಡೆಗೆ ಗಮನ ಹರಿಸುವಂತೆ ಪ್ರೇರಣೆ ನೀಡುತ್ತದೆ ಎಂದು ತಿಳಿದಿದ್ದವರು.

<u>ಕರ್ನಾಟಕ ವೀರರತ್ನಗಳು (1930):</u>

" ಕರ್ನಾಟಕತ್ವದ ಕಲ್ಪನೆ, ಕರ್ನಾಟಕದ ಬಗ್ಗೆ ಅಭಿಮಾನ, ಕರ್ನಾಟಕದ ಸರ್ವತೋಮುಖ ಅಭಿವೃದ್ಧಿ ಇಂಥ ಉದಾತ್ತ ವಿಚಾರಗಳನ್ನು ಕನ್ನಡಿಗರಲ್ಲಿ ಮೂಡಿಸುವುದಕ್ಕೆ ಅವರು ಈ ವೀರರತ್ನಗಳನ್ನು ಆಯ್ಕೆ ಮಾಡಿದರು " (ಪು.II ) ಎಂಬ ಉಷಾದೇವಿ ಪದರಾಜ ಹುಂಬಳಗೋಳ (ಆಲೂರರ ಮಗಳು) ಅವರ ಮಾತುಗಳು ಕೃತಿಯ ಉದ್ದೇಶವನ್ನು ಹೇಳುತ್ತವೆ. 'ವೀರರ ಸಂಬಂಧದಿಂದ ಬರೆದ ಭಾಷೆಯು ವೀರ್ಯದಿಂದ ತುಂಬಿರಬೇಕು' ಎನ್ನುವ ಆಲೂರರು 'ನೇನೆಗಳು ತಾಗಿದವು', 'ಬರಿಸಿಡಿಲನಂತರಗಿದನು', 'ತಾಗಿಕಳ್ತು', 'ಇರಿದು ಕೊಂದನು' ಮೊದಲಾದ ವೀರಗಲ್ಲಿನೊಳಗಿನ ಭಾಷೆಯನ್ನು ಬಳಸಿ 'ವೀರತ್ವದ ಅರಿವು ಮೂಡಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲೇ ಹೊಸ ತರಹದ ಈ ವೀರ ಭಾಷಾಶೈಲಿ ಕರ್ನಾಟಕತ್ವವನ್ನು ಮೂಡಿಸುವುದರಲ್ಲಿ ಒಳ್ಳೆಯ ಫಲಿತಾಂಶ ನೀಡಿತು.

ಕರ್ನಾಟಕವನ್ನಾಳಿದ ಪ್ರಸಿದ್ಧ ರಾಜಮನೆತನಗಳ, ಪಾಳೇಗಾರರ ಹಾಗೂ ಅರಸಿ ಅಕ್ಕಾದೇವಿ ವೀರನಾರಿ ಓಬವ್ವರಂಥ ಒಟ್ಟು ಇಪ್ಪತ್ತೊಂದು ವೀರರತ್ನಗಳನ್ನು ಕರ್ನಾಟಕದ ಚರಿತ್ರೆಯಿಂದ ಆರಿಸಿಕೊಂಡಿದ್ದಾರೆ. ರಾಜ್ಯವನ್ನು ಕಟ್ಟುವ, ಕಾಯುವ, ಸ್ವಾಭಿಮಾನ ವ್ಯಕ್ತಪಡಿಸುವ, ಪ್ರತಿಷ್ಠೆಯನ್ನು ಪೂರೈಸುವ ವೀರ — ಶೂರತ್ವಗಳನ್ನು ಪ್ರದರ್ಶಿಸುವ ಮುಂತಾದ ಆದರ್ಶಗಳನ್ನು ಆಲೂರರ 'ವೀರರತ್ನಗಳು' ಹೇಳಿ ಕನ್ನಡಿಗರನ್ನು ಹೆಮ್ಮೆಪಡುವಂತೆ ಮಾಡಿದೆ. ಅವರು ಮಯೂರ ವರ್ಮನ ಬಗೆಗೆ ಹೇಳುವಾಗ:

> " ಪ್ರಬಲ ಶಾರ್ದೂಲನಾದ ಆತನು ತನ್ನ ಮೇಲೆ ಕವಿದುಬರುವ ತುಳಿಲಾಳುಗಳನ್ನು ತುಳಿದು ತುಂಡರಿಸಿ, ಭುಜಖಡ್ಗದಿಂದ ಇರಿದಿರಿದು ದನೆ ಬಡೆಯುಂ, ಅದನ್ನು ಚೆಲ್ಲಾಪಿಲ್ಲಿಯಾಗಿ ಮಾಡಿದನು " (ಪುಟ: 45)

ಎಂದು ಆಲೂರರು ವೀರ — ಶೂರತ್ವಗಳನ್ನು ಒತ್ತಿ ಹೇಳಿದ್ದಾರೆ. ಇವನನ್ನು ಆಲೂರರು 'ಅಭಿಮಾನ ಮೇರು' ಎಂದು ಕರೆದು ಕರ್ನಾಟಕತ್ವವನ್ನು ಪ್ರದರ್ಶಿಸಿದ್ದಾರೆ.

ಅಕ್ಕಾದೇವಿಯ ಬಗೆಗೆ,

> " ಬಟ್ಟಬಯಲಾದ ಕಣದಲ್ಲಿ ಅಕ್ಕಾದೇವಿ ಕೊತವಾಲನ ಸಮ್ಮುಖನೈದಿದಳು. ಕೈಚಳದಿಂದ ಚಲಿಸುತ್ತಿರುವ ಅವಳ ಎರಡೇ ಭುಜಗಳು ಆತನಿಗೆ ಅಷ್ಟದಶ ಭುಜಗಳಾಗಿ ತೋರಿದವು. ಒಂದೊಂದು ಹಸ್ತದಲ್ಲಿಯೂ ಒಂದೊಂದು ಹದನವಾದ ಕೈದುಗಳು ಕಂಡವು! ಅಕ್ಕಾದೇವಿಯು ಆತನಿಗೆ ಮಹಿಷಾಸುರ ಮರ್ದಿನಿಯಾಗಿ ಕಾಣಿಸಿದಳು " (ಪುಟ: 49)

ಎಂದು ಹೇಳಿ ದೈವೀ ಸ್ವರೂಪವನ್ನು ನಿರೂಪಿಸಿದ್ದಾರೆ.

ಅದೇ ರೀತಿ ಇಡೀ 'ಕರ್ನಾಟಕ ವೀರರತ್ನಗಳು' ಪುಸ್ತಕವು ಉತ್ಸಾಹದ ಭಾಷೆಯಿಂದ ಕೂಡಿದೆ. 'ಕೆಚ್ಚೆಯುಂ ತಂಜೆಯುಂಕೊಂಡ', 'ಸೊರಟೂರಿಂದಮೆರೂಕ್ಕಿಗುಂಡಿವರೆಗಂ ಕೆಟಿಕ್ಕೊಡಿದ ಭಲ್ಲೂಮಂ', 'ಸಿಂಹವು ಹೆಣ್ಣಾದರೇನು? ಗಂಡಾದರೇನು? ಅದರ ವಿಕ್ರಾಂತವು ಯಾವಾಗಲೂ ಜಾಜ್ವಲ್ಯಮಾನವಾಗಿಯೇ ಇರುವುದು. 'ಗಂಡರ ಗಂಡನ ಕಾಲದಲ್ಲಿ ಕರ್ನಾಟಕದ ವೈಭವವು ಅತ್ಯುಚ್ಚವಾದ ಸ್ಥಿತಿಯನ್ನೈದಿತು'. ಹೀಗೆ ಅವರು ಬರೆಯುವ ಧಾಟಿ ಕರ್ನಾಟಕತ್ವದ ಬಗೆಗೆ ತಾನೇ ತಾನಾಗಿ ಅಭಿಮಾನ ಮೂಡಿಸುತ್ತದೆ. ಕನ್ನಡ ಮನೆತನಗಳ ವೀರರ ಧೈರ್ಯ — ಸಾಹಸಗಳು ಕನ್ನಡಿಗರನ್ನು ಹೆಮ್ಮೆ ಪಟ್ಟುಕೊಳ್ಳುವಂತೆ ಪ್ರೇರೇಪಿಸುತ್ತವೆ.

ಆಲೂರರು ಕನ್ನಡಿಗರ ಗುಣ ವಿಶೇಷಗಳನ್ನು ಹೇಳುವಾಗ ಕೇವಲ 'ವೀರತ್ವ — ಶೂರತ್ವ'ದ ಗುಣವೊಂದನ್ನು ಮಾತ್ರ ಆಯ್ಕೆ ಮಾಡಿಕೊಂಡಿದ್ದಾರೆ. ಇದು ಅವರಲ್ಲಿ ಬೇರು ಬಿಟ್ಟಿದ್ದ 'ಬಲಿಷ್ಠ ರಾಷ್ಟ್ರೀಯವಾದ'ದ ಪರಿಣಾಮ. 'ವೀರರತ್ನಗಳಂಥ' ಕೃತಿಗೆ ಅವರ 'ವೀರತ್ವ'ದ ಮೌಲ್ಯಗಳು ಸರಿ ಎನಿಸಬಹುದು. ಆದರೆ ಶಾಂತಿ — ಸಹನೆ, ಸಂಯಮ, ವಿದ್ವತ್ತು, ಕಲಾನೈಪುಣ್ಯತೆ, ಧಾರ್ಮಿಕ ಸಮನ್ವಯ ಮೊದಲಾದ ಗುಣ ವಿಶೇಷಗಳನ್ನು ಹೊಂದಿದ್ದ ಕರ್ನಾಟಕದ ಇತರ 'ರತ್ನ'

ಗಳನ್ನು ಆಲೂರರು ಪ್ರಸ್ತಾಪಿಸಬಹುದಿತ್ತು. ಆ ಮೂಲಕವೂ ಕನ್ನಡ — ಕರ್ನಾಟಕತ್ವದ ಅಭಿಮಾನವನ್ನು ಮೂಡಿಸಲು ಸಾಧ್ಯವಿತ್ತು ಅನ್ನಿಸುತ್ತದೆ. ಆದರೆ ಆಲೂರರು ಆ ನಿಟ್ಟಿನಲ್ಲಿ ಚಿಂತಿಸಿದ್ದು ಬಹಳ ಕಡಿಮೆ. ಚರಿತ್ರೆಯನ್ನು ಮಾಧ್ಯಮವನ್ನಾಗಿ ಬಳಸಿಕೊಂಡ ಆಲೂರರು ಸಮಚಿತ್ತತೆ, ವಸ್ತುನಿಷ್ಠತೆಗಳ ಕಡೆಗೆ ಗಮನ ಹರಿಸದೆ ಕಲ್ಪನೆ, ಭಾವುಕತೆಗಳಿಗೆ ಹೆಚ್ಚು ಮಹತ್ವ ನೀಡಿದ್ದಾರೆ. ಇದರಿಂದಾಗಿ ಅನೇಕ ಚರ್ಚಾಸ್ಪದ ವಿಷಯಗಳು ಅವರ ಸಾಹಿತ್ಯ ಚಿಂತನೆಯಲ್ಲಿ ಎದ್ದು ಕಾಣುತ್ತವೆ. ಆದರೆ ಅವರ ಆಶಯಗಳ ಮುಂದೆ ಇವು ಗೌಣವಾಗಿಬಿಡುತ್ತವೆ.

## ಕರ್ನಾಟಕತ್ವದ ಸೂತ್ರಗಳು (1950):

ವೆಂಕಟರಾಯರೇ ಹೇಳಿಕೊಂಡಿರುವಂತೆ ಇದು ಕನ್ನಡ ಕರ್ನಾಟಕತ್ವವನ್ನು ಸಾರುವ ಸಣ್ಣ ಕೃತಿ. ಕನ್ನಡ — ಕರ್ನಾಟಕದ ಬಗ್ಗೆ ಅಭಿಮಾನವನ್ನು ಮೂಡಿಸಲು ತಮ್ಮ ತಾತ್ವಿಕ ಚಿಂತನೆಯನ್ನು ಸೂತ್ರಗಳ ರೂಪದಲ್ಲಿ ಹಿಡಿದಿಡುವ ಪ್ರಯತ್ನವನ್ನು ಆಲೂರರ ಈ ಕೃತಿ ಮಾಡಿದೆ. 1950ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಆ ಸಂದರ್ಭಕ್ಕೆ ಅವಶ್ಯ ಎನಿಸಿದ ವಿಚಾರಗಳಿಗೆ ಪ್ರಾಮುಖ್ಯತೆ ಕೊಟ್ಟು ಕನ್ನಡಿಗರನ್ನು ಮತ್ತೆ ಎಚ್ಚರಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡ — ಕರ್ನಾಟಕತ್ವವನ್ನು ಒಳಗೊಂಡ ಈ ಸೂತ್ರಗಳಲ್ಲಿ ಆಧ್ಯಾತ್ಮಿಕ ಪ್ರಭಾವ ಮೂಲಕ ಅಭಿವ್ಯಕ್ತಗೊಂಡಿರುವ ಚಿಂತನೆ ಕಂಡುಬರುತ್ತದೆ. ಆಲೂರರ ದ್ವೈತ ಸಿದ್ಧಾಂತ ಬೆರೆತಿರುವುದನ್ನು ಈ ಸೂತ್ರಗಳಲ್ಲಿ ಕಾಣಬಹುದು. ಈ ಕೃತಿ ಅಂದು ಕನ್ನಡಿಗರ ವೈಚಾರಿಕ ಚಿಂತನೆಗೆ ಸೂಕ್ತ ಮಾರ್ಗದರ್ಶನ ನೀಡಿತು.

ಹೀಗೆ ಆಲೂರರು ಅಖಂಡ ಕರ್ನಾಟಕದ ನಿರ್ಮಾಣ ಹಾಗೂ ಭಾರತದ ಸ್ವಾತಂತ್ರ್ಯಗಳ ಹಿನ್ನೆಲೆಯಲ್ಲಿ ನೇರವಾಗಿ ಕರ್ನಾಟಕತ್ವವನ್ನು ಮೂಡಿಸಲು ಪ್ರಯತ್ನಿಸಿದ್ದಾರೆ. ತಮ್ಮ 'ಜಯಕರ್ನಾಟಕ' ಪತ್ರಿಕೆಯಲ್ಲಿ ನಾಡಿನ ಸಾಹಿತ್ಯ, ಚರಿತ್ರೆ, ಕಲೆ, ಸಂಸ್ಕೃತಿಗಳ ಬಗ್ಗೆ ಲೇಖನಗಳನ್ನು ಬರೆದರು. ಅಲ್ಲದೆ ಇತರರಿಗೂ ಬರೆಯಲು ಅವಕಾಶ ಮಾಡಿಕೊಟ್ಟರು. ನಾಡು — ನುಡಿಗಳನ್ನು ಕುರಿತಂತೆ ಅನೇಕ ಪತ್ರಿಕೆಗಳಲ್ಲಿ, ಕೃತಿಗಳಲ್ಲಿ ಲೇಖನಗಳನ್ನು ಆಲೂರರು ಪ್ರಕಟಿಸಿದ್ದಾರೆ. ಅವರು ಏನೇ ಯೋಚನೆ ಮಾಡಿದರೂ ಅಥವಾ ಬರೆದರೂ ಅದು ಕನ್ನಡ — ಕರ್ನಾಟಕತ್ವದ ತಾತ್ವಿಕ ಚಿಂತನೆಯ ಎಲ್ಲೆಗಳನ್ನು ಮೀರುತ್ತಿರಲಿಲ್ಲ. ಇದು ಅವರ ಸಾಹಿತ್ಯ ಚಿಂತನೆಯಿಂದ ವ್ಯಕ್ತಗೊಳ್ಳುವ ಕರ್ನಾಟಕತ್ವದ ತಿರುಳು.

ಅಧ್ಯಾಯ: 6

## ತಳೆದ ನಿಲುವು

ಆಲೂರರ ಬರಹ – ಭಾಷಣ, ಕಾರ್ಯ – ಚಟುವಟಿಕೆಗಳು ಕನ್ನಡ – ಕರ್ನಾಟಕದ ಬಗೆಗಿನ ತಾತ್ವಿಕ ಚಿಂತನೆಯನ್ನು ಒಳಗೊಂಡಿದ್ದವು. ಅವು ಯಾವುದೇ ನೆಲೆಯಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡರೂ ಅದು ಕರ್ನಾಟಕತ್ವದ ಚಳುವಳಿಯಾಗಿ ರೂಪ ಪಡೆಯುತ್ತಿತ್ತು. ಕನ್ನಡ ನವೋದಯದ ಸಂದರ್ಭದಲ್ಲಿ ಇವರ ವೈಚಾರಿಕ ಚಿಂತನೆ ಛಿದ್ರವಾಗಿದ್ದ ಕನ್ನಡ ಪ್ರದೇಶಗಳನ್ನು ಅಖಂಡವನ್ನಾಗಿಸುವ ಕಡೆಗೆ ಗಮನ ಸೆಳೆಯುವಂತೆ ಮಾಡಿತು. ತಮ್ಮ ಗದ್ಯದ ಮೂಲಕವೇ ಆಲೂರರು ಕನ್ನಡಿಗರನ್ನು ಎಚ್ಚರಿಸಿ 'ಪ್ರೇರಕಶಕ್ತಿ'ಯಾಗಿ ಗುರುತಿಸಿಕೊಂಡಿದ್ದಾರೆ. ಅವರ ಸುತ್ತಮುತ್ತಲಿನ ಪರಿಸರ ಭಾವುಕತೆಯಿಂದ ವಿಚಾರ ಮಾಡುತ್ತಿದ್ದ ಕಾಲವದು. ಅಲ್ಲದೆ ಮರಾಠಿಗರ 'ಬೃಹನ್ ಮಹಾರಾಷ್ಟ್ರ'ದ ಪರಿಕಲ್ಪನೆ ಹೆಚ್ಚು ಆಕ್ರಮಣಶೀಲ ದೃಷ್ಟಿಯಿಂದ ಹೊರಟದ್ದು. ಇಂಥ ಸನ್ನಿವೇಶದ ಮಧ್ಯೆ ಅಧಿಕಾರಶಾಹಿಯನ್ನು ಪ್ರತಿಭಟಿಸುವ ಅನಿವಾರ್ಯತೆಯೂ ಇತ್ತು. ಇವೆಲ್ಲದರ ನಡುವೆ ಕನ್ನಡ – ಕನ್ನಡಿಗ – ಕರ್ನಾಟಕದ ಬಗ್ಗೆ ಗಮನ ಹರಿಸುವ ಆಲೂರರು ಸ್ವಲ್ಪ ಅತಿರೇಕವಾಗಿ ಆಲೋಚಿಸುವವರಾಗಿ ಕಂಡುಬರುವುದು ಸಹಜವೇ. ಅವರಲ್ಲಿದ್ದ ಇಂಗಿತ 'ನನ್ನನ್ನು ಸಂಪೂರ್ಣ ಮರೆತು ಕರ್ನಾಟಕವನ್ನು ಮಾತ್ರ ನೆನೆಯಿರಿ' ಎಂಬುದು. ಕರ್ನಾಟಕವನ್ನು ಔನ್ನತ್ಯಕ್ಕೆ ಏರಿಸುವ ಹಂಬಲ ಆಲೂರರದು.

ಗಾಂಧಿ ಅವರ ಸಮಾಜ ಸುಧಾರಣೆಯ ನಿಲುವುಗಳಿಗೆ ಆಲೂರರು ಹೆಚ್ಚು ಪ್ರತಿಸ್ಪಂದಿಸುವುದಿಲ್ಲ. ಆದರೆ ಅವರ ಅಸಹಕಾರ, ರಾಷ್ಟ್ರೀಯ ಶಿಕ್ಷಣ, ಖಾದಿ ಚಳುವಳಿಗಳಿಗೆ ನೇರವಾಗಿ ಪ್ರತಿಸ್ಪಂದಿಸುತ್ತಾರೆ. ಆಲೂರರು ರಾಷ್ಟ್ರೀಯ ಮಟ್ಟದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡಿದವರಲ್ಲ. ಅಲ್ಲದೆ ಅವರಲ್ಲಿನ ಕೆಲವು ವೈಯಕ್ತಿಕ ದೋಷಗಳೂ ಸಹ ಈ ನಿಟ್ಟಿನಲ್ಲಿ ಮುಂದೆ ಬಿಡಲಿಲ್ಲ. ಅವರು ಜನಸಮೂಹದೊಡನೆ ನಿಂತು ಭಾಷಣ ಮಾಡಿ ಜಾಗೃತರನ್ನಾಗಿಸುವ ನೇತಾರರಾಗಿ ಕಾರ್ಯ ನಿರ್ವಹಿಸಲಿಲ್ಲವಾದರೂ ತಮ್ಮ ಬರಹ, ಸಭೆಗಳ ಮೂಲಕ

ಕಾರ್ಯ — ಯೋಜನೆಗಳನ್ನು ರೂಪಿಸಿದವರು. ಕರ್ನಾಟಕತ್ವದ ಗುಪ್ತ ಸಭೆಗಳು, ಚಟುವಟಿಕೆಗಳು ಆಲೂರರನ್ನು ಪೋಲೀಸರ 'ಕಪ್ಪು ಪಟ್ಟಿ' (Black list)ಯಲ್ಲಿ ಸೇರುವಂತೆ ಮಾಡಿದವು. ಅಲ್ಲದೆ ಅವರನ್ನು 'ಕಲಘಟಗಿ' ಸೆರೆಮನೆಗೂ ದೂಡುವಂತೆ ಮಾಡಿದವು.

ಆಲೂರರಿಗೆ ತಾವು ಕರ್ನಾಟಕತ್ವದ ಚಿಂತನೆಯಲ್ಲಿ ಮಿತಿ ಮೀರಿ ವರ್ತಿಸಿಲ್ಲ ಎಂಬುದು ಸ್ಪಷ್ಟವಾಗಿ ಗೊತ್ತಿತ್ತು. ಆದರೂ ಅಂದಿನ ಸಮಾಜ ಅವರನ್ನು ಈ ಹಿನ್ನೆಲೆಯಲ್ಲಿ ನೋಡಿದೆ ಅನ್ನಿಸುತ್ತದೆ. ಸಮಕಾಲೀನರು ಅವರನ್ನು ಟೀಕಿಸಿದ್ದರೂ ಅವರು ಸಂಕುಚಿತವಾಗಿ ಯೋಚಿಸಿಲ್ಲ, ಆಕ್ರಮಣಕಾರಿಯಾಗಿ ನಡೆದುಕೊಂಡಿಲ್ಲ ಎಂಬುದು ಸ್ಪಷ್ಟ. ವೈಶಾಲ್ಯದ ದೃಷ್ಟಿ ಅವರಲ್ಲಿ ಇತ್ತು. ಅವರನ್ನು ಟೀಕಿಸುವಾಗ ಅಂದಿನ ಚಾರಿತ್ರಿಕ ಸನ್ನಿವೇಶ, ಕರ್ನಾಟಕವನ್ನು ಅಖಂಡವನ್ನಾಗಿಸುವ ಆಶಯ, ವಸಾಹತುಶಾಹಿ ಧೋರಣೆಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು. ಅಲ್ಲದೆ ಕನ್ನಡಿಗರಲ್ಲಿದ್ದ ಕರ್ನಾಟಕದ ಬಗೆಗಿನ ಭ್ರಾಮಕ ಕಲ್ಪನೆಗಳನ್ನು ದೂರ ಮಾಡಬೇಕಾದ ಅಂದಿನ ಅನಿವಾರ್ಯತೆಯನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಇದಕ್ಕಾಗಿ ಆಲೂರರು ಭಾವುಕ, ಅತಿರೇಕಗಳಿಂದ ಕೂಡಿದ 'ಕಾಲ್ಪನಿಕ ವೈಭವದ ದರ್ಶನ' ಮಾಡಿಸುತ್ತಾರೆ. ಅಂದಿನ ಬಹುಪಾಲು ರಾಷ್ಟ್ರೀಯವಾದಿಗಳು ಮಾಡಿದ್ದು ಇದನ್ನೇ. ನಾಡು — ನುಡಿ — ಸಂಸ್ಕೃತಿಗಳ ಬಗ್ಗೆ ಎಲ್ಲಿಲ್ಲದ ಅಭಿಮಾನ ಕಂಡು ಬರುವುದು ಆಲೂರರ ಅಂತರ್ಯದಲ್ಲಿ. ಆ ತುಡಿತವೇ ಅವರನ್ನು ಮತ್ತಾರೂ ಸಹ ಚಿಂತನೆ ಮಾಡದಷ್ಟು ವಿಚಾರಗಳನ್ನು ಅಭಿಮಾನದಿಂದ ಹೊರಗೆಡಹುವಂತೆ ಮಾಡಿತು.

ಸಾಂಸ್ಕೃತಿಕವಾಗಿ ದತ್ತವಾಗಿರುವ 'ಕರ್ನಾಟಕ' ಎಂಬ ಹೆಸರು ಅವರನ್ನು ಪುಳಕಿತರನ್ನಾಗಿಸುತ್ತಿತ್ತು ಅನ್ನಿಸುತ್ತದೆ. ಆದ್ದರಿಂದಲೇ ಅವರು ಒಂದಾದ ಕನ್ನಡ ಭಾಗಗಳನ್ನು 'ಮೈಸೂರು ರಾಜ್ಯ' ಎಂದು ಕರೆಯುವುದಕ್ಕೆ ಪ್ರತಿಭಟಿಸಿದ್ದು. ಅವರ ವಿಚಾರಗಳಲ್ಲಿ ಮೈಸೂರಿಗರನ್ನು ವಸಾಹತುಶಾಹಿಯ ದಾಸ್ಯ ಮನೋಭಾವದಲ್ಲಿಯೇ ಇಟ್ಟು ನೋಡುವುದು ಅಭಿವ್ಯಕ್ತಗೊಂಡಿದೆ. ಅವರು ಮೈಸೂರಿಗರ ನಿರಭಿಮಾನದ ಧೋರಣೆಯನ್ನು ಸಾಯುವವರೆಗೂ ಶಪಿಸುತ್ತಲೇ ಇದ್ದರು. 'ಕರ್ನಾಟಕ' ಎಂಬ ಹೆಸರನ್ನು ಯಾವುದೇ ಕಾರಣಕ್ಕೂ ಬಿಡಲು ಒಪ್ಪದ ಆಲೂರರು ತಮ್ಮ ರಾಜ್ಯೋತ್ಸವದ ಆಕಾಶವಾಣಿ ಭಾಷಣದಲ್ಲೂ ಬಳಸದೆ ಬಿಡಲಿಲ್ಲ. 'ಮೈಸೂರು ರಾಜ್ಯ' ಎಂದು ಬಳಸಲೇಬೇಕಾದರೆ ತಾವು ಭಾಷಣವನ್ನೇ ಮಾಡುವುದಿಲ್ಲ ಎಂದು

ಹಟ ತೊಟ್ಟರು. ಅವರ ಈ ನಿಲುವು ಯಥಾರ್ಥ ಸ್ವರೂಪದ ಪ್ರತೀಕವಾಗಿ ಉಳಿಯುತ್ತದೆ. ಅದೇ ರೀತಿಯಲ್ಲಿ ಭಾರತದ ರಾಷ್ಟ್ರಗೀತೆಯಲ್ಲೂ, ಆಲೂರರು ಕರ್ನಾಟಕತ್ವವನ್ನು ಅಪೇಕ್ಷಿಸುವುದು ವ್ಯಕ್ತವಾಗಿದೆ. '... ದ್ರಾವಿಡ' ಎಂಬ ಪದವೊಂದರಿಂದಲೇ ಕರ್ನಾಟಕವನ್ನು ಗುರುತಿಸಲು ಸಾಧ್ಯ ಇಲ್ಲ ಎಂದು ಟೀಕಿಸಿದ್ದಾರೆ. 'ಕರ್ನಾಟಕ' ದ ಹೆಸರನ್ನು ರಾಷ್ಟ್ರಗೀತೆಯಲ್ಲಿ ಸೇರಿಸಲು ಮಾಡಿದ ಪ್ರಯತ್ನಗಳು ಅವರನ್ನು 'ಅತಿರೇಕವಾದಿ' ಯನ್ನಾಗಿ ಮಾಡುತ್ತವೆಯೇನೋ ಅನ್ನಿಸುತ್ತದೆ. ಆದರೆ ಇದರ ಹಿಂದೆ ಇರುವುದು ಅವರ ಅಚಲವಾದ 'ಕರ್ನಾಟಕತ್ವ' ದ ಚಿಂತನೆ ಎಂಬುದರಲ್ಲಿ ಅನುಮಾನವಿಲ್ಲ.

ಆಲೂರರು ರಾಜಕಾರಣ, ಭಾಷೆ, ಧರ್ಮ ಮೊದಲಾದವುಗಳ ಮೂಲಕ ಸಾಂಸ್ಕೃತಿಕ ವ್ಯಕ್ತಿತ್ವವಾಗಿ ಉಳಿಯುವ ಪ್ರಯತ್ನ ನಡೆಸುತ್ತಾರೆ ಅನ್ನಿಸುತ್ತದೆ. ಆದರೆ ಅವರಲ್ಲಿನ ಚಿಂತನೆಗಳು ಕೆಲವೊಮ್ಮೆ ಪೂರಕವಾಗಿ ಕಂಡರೂ ಪರಸ್ಪರ ಡಿಕ್ಕಿ ಹೊಡೆಯುವುದನ್ನು ನೋಡಬಹುದು. ಉದಾಹರಣೆಗೆ ಅವರು ರಾಷ್ಟ್ರೀಯತೆಯನ್ನೂ, ಧರ್ಮವನ್ನೂ ಒಂದೇ ದೃಷ್ಟಿಕೋನದಲ್ಲಿ ನೋಡುವ ನೋಟ. ಅವು ವಿಭಿನ್ನ ನೆಲೆಗಳಾಗಿ ನಿಲ್ಲುವಂಥ ಆಧುನಿಕ ಪರಿಕಲ್ಪನೆಗಳಾಗಿಬಿಡುತ್ತವೆ ಎಂಬುದು ವಾಸ್ತವ ಸಂಗತಿ. ಆದ್ದರಿಂದಲೇ ಗಾಂಧಿ ಮತ್ತು ಆಲೂರರು ವಿಭಿನ್ನ ತಾತ್ವಿಕ ನೆಲೆಗಳಲ್ಲಿ ನಿಲ್ಲುವುದು. ತಿಲಕ್ ಮತ್ತು ಅರವಿಂದರು ಅದ್ವೈತ ಸಿದ್ಧಾಂತಗಳನ್ನು ರಾಷ್ಟ್ರೀಯತ್ವದಲ್ಲಿ ಅನ್ವಯಿಸುವ ಪ್ರಯೋಗ ಮಾಡಿದ್ದಾರೆ. ಬಹುಶಃ ಈ ರೀತಿಯ ಪ್ರೇರಣೆಗಳಿಂದಲೇ ಆಲೂರರೂ ಸಹ ತಮ್ಮ ದ್ವೈತ (ಮಧ್ವ) ವಿಚಾರಧಾರೆಯನ್ನು ರಾಷ್ಟ್ರೀಯತೆಗೆ ಜೋಡಿಸಿರುವುದು ಅನ್ನಿಸುತ್ತದೆ. 'ಕರ್ನಾಟಕಾಂತರ್ಗತ ಭಾರತಮಾತೆ' ಯು ಇವರ ದೃಷ್ಟಿ ರಾಷ್ಟ್ರಪ್ರೇಮದ ಉಪತತ್ವವಾಗಿ ನಿಲ್ಲುವುದು ಈ ಎಲ್ಲದರ ಹಿನ್ನೆಲೆಗಳಿಂದಲೇ.

ಆಧ್ಯಾತ್ಮಿಕ ಚಿಂತನೆಯು ಆಲೂರರನ್ನು ಕರ್ನಾಟಕತ್ವದ ವಿಚಾರಗಳಲ್ಲಿ ಹೇಗೆ ಪ್ರತಿಬಂಧಿಸಿದೆ ಎಂಬುದನ್ನು ಅವರ ಬರಹಗಳಿಂದಲೇ ಅರಿಯಬಹುದು. ಆಲೂರರು ಮಾಡುವುದು ಒಂದು ರೀತಿಯಲ್ಲಿ 'ಕನ್ನಡ ಯಜ್ಞ' ಆಗುತ್ತದೆ. ಅಲ್ಲದೆ ಪುರೋಹಿತರಂತೆ ಕನ್ನಡ — ಕರ್ನಾಟಕತ್ವದ ಕೆಲಸಗಳನ್ನು ಮುಂದೆ ನಿಂತು ಮಾಡುತ್ತಿದ್ದ ಬಗೆಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡು 'ಕನ್ನಡ ಕುಲಪುರೋಹಿತ' ಎಂದು ಕರೆದಿದ್ದಾರೆ. ಈ ರೀತಿಯಲ್ಲಿ ಅವರನ್ನು ಕರೆಯುವುದರ ಮೂಲಕ ಜಾತಿವಾದಿಯನ್ನಾಗಿಸುವುದು ಸರಿ ಅಲ್ಲವೆಂಬ ಅಭಿಪ್ರಾಯ

ಬಸವರಾಜ ಕಟ್ಟೀಮನಿ ಅವರದು. ಅವರ ಪ್ರಗತಿಪರ ಧೋರಣೆಗೆ ಆಂಗ್ಲ ವಿಚಾರಗಳು ಪ್ರಭಾವ ಬೀರಿವೆ. ಅದೇ ವೇಳೆಯಲ್ಲಿ ವರ್ಣಾಶ್ರಮ ವಿಚಾರಗಳು ಅವರನ್ನು ಬಿಡುವುದಿಲ್ಲ. ಈ ರೀತಿಯ ಎರಡೂ ವೈರುಧ್ಯಗಳನ್ನು ಅವರ ಚಿಂತನೆಯಲ್ಲಿ ಗುರುತಿಸಬಹುದು.

ಆಲೂರರು ಭಾಷೆ ಮತ್ತು ಪ್ರಾಂತೀಯವಾದದ ಬಗ್ಗೆ ಚಿಂತನೆಯನ್ನು ಮಾಡುವಾಗ ರಾಷ್ಟ್ರೀಯ ದೃಷ್ಟಿಕೋನವನ್ನು ಇಟ್ಟುಕೊಂಡಿದ್ದರು. ಆದರೆ ಅವರಲ್ಲಿ ರಾಷ್ಟ್ರ ದರ್ಶನದ ಕೊರತೆ ಇತ್ತು ಎಂಬುದು ಸ್ಪಷ್ಟ ಆಗುತ್ತದೆ. ಅವರು ಕನ್ನಡಿಗರಲ್ಲಿ ಜಾಗೃತಿಯನ್ನು ಮೂಡಿಸುವಂತೆ ಮಾಡುತ್ತಾರಾದರೂ ನಾಯಕತ್ವ ವಹಿಸಿಕೊಂಡು ಮುನ್ನಡೆಸುವುದಿಲ್ಲ. ಅಂದರೆ ಜನ ನಿರ್ವಹಣೆಯ ಸಾಮರ್ಥ್ಯ ಕಡಿಮೆ. ವೈಚಾರಿಕವಾಗಿ ಎಲ್ಲ ವಿಷಯಗಳನ್ನು ಹೊಸ ನೋಟದಿಂದ ನೋಡುತ್ತಿದ್ದರು. ಕನ್ನಡಿಗರ ಸರ್ವಾಂಗೀಣ ಪ್ರಗತಿಯ ಕಡೆಗೆ ಆಲೂರರ ದೃಷ್ಟಿ ಇತ್ತು. ಅದೇ ರೀತಿಯಲ್ಲಿ ಮಹಿಳಾ ಸ್ವಾತಂತ್ರ್ಯದಂಥ ವಿಚಾರಗಳಿಗೂ ಮುಕ್ತವಾಗಿ ಪ್ರತಿಸ್ಪಂದಿಸಿದ್ದಾರೆ. ಹೆಣ್ಣುಮಕ್ಕಳಿಗೆ ಶಿಕ್ಷಣ, ಮತದಾನದ ಸ್ವಾತಂತ್ರ್ಯ, ಸ್ವತಂತ್ರ ಜೀವನದಂಥ ವಿಚಾರಗಳ ಕಡೆಗೆ ಗಮನ ಹರಿಸಿದ್ದ ಅವರು ನಾವೀನ್ಯತೆಗೆ ಪ್ರೋತ್ಸಾಹಿಸುತ್ತಿದ್ದರು. ಅದೇ ರೀತಿಯಲ್ಲಿಯೇ ಇತರರನ್ನು ಸ್ವತಂತ್ರ ವಿಚಾರಗಳಿಗೆ ಪ್ರತಿಕ್ರಿಯಿಸಲು ತಮ್ಮ 'ಜಯಕರ್ನಾಟಕ' ಪತ್ರಿಕೆ ಮೂಲಕ ಅವಕಾಶ ಮಾಡಿಕೊಡುತ್ತಿದ್ದರು.

ಆಲೂರರ ಒಟ್ಟು ಚಿಂತನೆಯ ಸಾರ ಸಂಗ್ರಹವನ್ನು ಮೂರು ರೀತಿಗಳಲ್ಲಿ ವಿಂಗಡಿಸಬಹುದು. ಅವು ರಾಷ್ಟ್ರೀಯ ಜಾಗೃತಿ, ಕರ್ನಾಟಕತ್ವದ ಜಾಗೃತಿ ಹಾಗೂ ಧಾರ್ಮಿಕ ಜಾಗೃತಿ. ರಾಷ್ಟ್ರೀಯ ಜಾಗೃತಿ ಎಂಬುದು ಭಾರತದ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತದೆ. ಕರ್ನಾಟಕತ್ವದ ಜಾಗೃತಿ ಕನ್ನಡಿಗರನ್ನು, ಕರ್ನಾಟಕವನ್ನು ಒಂದುಮಾಡಲು ಹೊರಟದ್ದು. ಧಾರ್ಮಿಕ ಜಾಗೃತಿ ಎಂಬುದು 'ಹಿಂದುತ್ವ' ದಲ್ಲಿ ಇಡೀ ರಾಷ್ಟ್ರವನ್ನೇ ಒಂದು ಮಾಡುವ ನೋಟವನ್ನು ಹೇಳುತ್ತದೆ. ಈ ಮೂರೂ ಅಂಶಗಳಲ್ಲಿ ಮೊದಲೆರಡು ವಸಾಹತುಶಾಹಿ ವಿರುದ್ಧ ಪ್ರತಿಕ್ರಿಯಿಸುತ್ತವೆ. ಆದರೆ ಮೂರನೆಯದು (ಧಾರ್ಮಿಕ ಜಾಗೃತಿ) ಹಿಂದುವಲ್ಲದ ಮತದವರನ್ನು ಪರಕೀಯರನ್ನಾಗಿಸಿ ನೋಡುವುದರ ಮೂಲಕ ವಿರೋಧಿಗಳೆಂದು ಅಭಿವ್ಯಕ್ತಿಸುವುದು. ಅದರಲ್ಲೂ ಆಂಗ್ಲರನ್ನು ಪರಕೀಯ ಸಂಸ್ಕೃತಿಯೊಂದಿಗೆ ಭಾರತವನ್ನಾಕ್ರಮಿಸಿದ ಹಿಂದೂ ವಿರೋಧಿಗಳೆಂದು ಆಲೂರರು ಜನರಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ಇಂಥ ಚಿಂತನೆ ಆಲೂರರ ವೈಚಾರಿಕತೆಯಲ್ಲಿ ಗಾಢವಾಗಿದೆ.

ಧಾರ್ಮಿಕ ಜಾಗೃತಿಯ ಹಿನ್ನೆಲೆಯಲ್ಲಿ ಆಲೂರರು 'ಹಿಂದೂ ಮಹಾಸಭಾ' ದಂಥ ಸಂಘಟನೆಗಳ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದುದು ತಿಳಿಯುತ್ತದೆ. ವಿ.ಡಿ. ಸಾವರಕರ (ಹಿಂದೂ ಮಹಾಸಭಾದ ಅಂದಿನ ಅಧ್ಯಕ್ಷ) ಆಲೂರರೊಂದಿಗೆ ನಡೆಸುತ್ತಿದ್ದ ಪತ್ರ ವ್ಯವಹಾರಗಳಲ್ಲಿ 'ಹಿಂದುತ್ವ' ದ ಪ್ರತಿಪಾದಕರನ್ನಾಗಿ ಅವರನ್ನು ನೋಡಿರುವುದು ಸ್ಪಷ್ಟ. ಸಾವರ್ಕರ್ ಅವರು ತಮ್ಮ ಪತ್ರ ಒಂದರಲ್ಲಿ (ದಿನಾಂಕ 15.7.1938) ಭಾರತ ಮತ್ತು ಕನ್ನಡ ಪ್ರದೇಶಗಳಲ್ಲಿನ 'ಮುಸ್ಲಿಂ ಲೀಗ್' ನ ಕಾರ್ಯ ಚಟುವಟಿಕೆಗಳನ್ನು ಗಮನದಲ್ಲಿ ಇಟ್ಟುಕೊಂಡು 'ಹಿಂದುತ್ವ' ದ ಜಾಗೃತಿಯ ಇಂಗಿತವನ್ನು ವ್ಯಕ್ತಪಡಿಸಿದ್ದಾರೆ. ಇಂಥ ಕಾಗದ — ಪತ್ರಗಳು, ಸಮಕಾಲೀನ ರಾಷ್ಟ್ರೀಯವಾದ (ಹಿಂದೂವಾದವೇ ಆಗಿತ್ತು) ಮೊದಲಾದವುಗಳು ಅವರನ್ನು ಮತ್ತಷ್ಟು ಸನಾತನ ಧರ್ಮೀಯನನ್ನಾಗಿಸಿದ್ದವು. ಅಂದಿನ ಹಿಂದು — ಮುಸ್ಲಿಂ ಕೋಮುವಾದದ ಸಂಘಟನೆಗಳು ಪರಕೀಯತೆಯ ಬೀಜವನ್ನು ಬಿತ್ತಿದ್ದವು. ಇದರ ಪರಿಣಾಮ ಅಂದಿನ ಕರ್ನಾಟಕತ್ವದ ಪರಕಲ್ಪನೆಯ ಮೇಲೆ ಆಗದಿರಲಿಲ್ಲ. ಅದು ಇಂದಿಗೂ ಆಗುತ್ತಿದೆ.

ಆಲೂರರ ಕಾಲಕ್ಕೆ ಪ್ರಸ್ತುತವಾಗಿದ್ದ ಕರ್ನಾಟಕತ್ವದ ಜಾಗೃತಿಯೇ ಬೇರೆ. ನಮಗೆ ಇಂದು ಬೇಕಿರುವ ಕರ್ನಾಟಕದ ಅಭಿಮಾನವೇ ಬೇರೆ. ಅಂದು ಅಖಂಡ ಕರ್ನಾಟಕ ಆಗಬೇಕಿತ್ತು. ಇಂದು ಕರ್ನಾಟಕದ ಜನತೆಯ ಪ್ರಗತಿ ಮುಖ್ಯ. ಏಕೀಕರಣವಾಗಿ ಮೂರೂವರೆ ದಶಕಗಳೇ ಕಳೆದಿದ್ದರೂ ಕರ್ನಾಟಕದ ಹಲವು ಭಾಗಗಳಲ್ಲಿ ಪ್ರಗತಿಯೇ ಆಗಿಲ್ಲ. ಇಂದಿಗೂ ಅನೇಕ ಪ್ರದೇಶಗಳು ಪ್ರಾಥಮಿಕ ಅವಶ್ಯಕತೆಗಳಿಂದ ವಂಚಿತಗೊಂಡಿವೆ. ಇನ್ನೂ ಏಕೀಕೃತಗೊಳ್ಳದ ಕನ್ನಡ ಪ್ರದೇಶಗಳ ಬಗ್ಗೆ ಯೋಚಿಸುವುದಕ್ಕಿಂತ ಏಕೀಕೃತಗೊಂಡಿರುವ ಗಡಿನಾಡಿನ ಕನ್ನಡಿಗರ ಪ್ರಗತಿ ಬಗ್ಗೆ ಯೋಚಿಸುವುದು ಒಳಿತು. ಅವರ ಸಮಸ್ಯೆಗಳಿಗೆ ಎಲ್ಲ ನೆರೆ ರಾಜ್ಯಗಳವರು ಪ್ರತಿಸ್ಪಂದಿಸಬೇಕಿದೆ. 'ಮಹಾಜನ್ ವರದಿ' ಗಳಂಥ ಸಮಸ್ಯೆಗಳು ಬಗೆಹರಿಯಬೇಕಿರುವುದು ಸಾಮರಸ್ಯದಿಂದ. ಭಾವುಕತೆ, ಉದ್ವೇಗಗಳಿಂದ ಅಲ್ಲ. ಸಾಂಸ್ಕೃತಿಕವಾಗಿ ಕನ್ನಡಿಗರು ಒಂದಾಗುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಸಾಮಾಜಿಕವಾಗಿಯೂ ಸಹ. ಕರ್ನಾಟಕವು ಆರ್ಥಿಕಾಭಿವೃದ್ಧಿಯಿಂದ ತನ್ನನ್ನು ತಾನು ಸ್ವಯಂ ಪರಿಪೂರ್ಣವಾದುದು ಎಂದು ಗುರುತಿಸಿಕೊಳ್ಳಬೇಕಿದೆ. ಆ ಮೂಲಕವೇ ಒಂದು ರಾಷ್ಟ್ರದ ಪ್ರಗತಿ, ಘನತೆಗಳನ್ನು ಉಳಿಸಿಕೊಳ್ಳಲು ಸಾಧ್ಯ. ಈ ನಿಟ್ಟಿನಲ್ಲಿ ಕನ್ನಡ — ಕರ್ನಾಟಕತ್ವಗಳನ್ನು ಪ್ರದರ್ಶಿಸುವುದು ಇಂದಿನ ಅನಿವಾರ್ಯತೆ ಎನಿಸಿದೆ.

ಕನ್ನಡ ಮಾತನಾಡುವ ಪ್ರದೇಶಗಳು ಭೌಗೋಳಿಕವಾಗಿ ಒಂದುಗೂಡುವುದು ಅಂದು ತೀರ ಅವಶ್ಯಕ ಎನಿಸಿದ್ದ ಸಂಗತಿ. ಅದೇ ರೀತಿಯಲ್ಲಿ ಕನ್ನಡಿಗರು ಒಂದಾಗುವುದೂ ಸಹ. ಸಂಖ್ಯೆಯ ದೃಷ್ಟಿಯಿಂದ ಅಲ್ಲ; ಭಾವನಾತ್ಮಕವಾಗಿ. ಆದರೆ ಇಂದು "ಕನ್ನಡ ನಾಡು ಒಂದಾಗಿದೆಯಾದರೂ ಕನ್ನಡಿಗರು ಒಂದಾಗಿಲ್ಲ" ಎಂಬ ಮಾತು ಪ್ರಸ್ತುತಗೊಳ್ಳುತ್ತಿದೆ. ಅಂದರೆ ಕರ್ನಾಟಕವು ಸಂಪೂರ್ಣವಾಗಿ 'ಭಾವನಾತ್ಮಕ ಏಕೀಕರಣ' ವನ್ನು ಸಾಧಿಸುವುದು ಇಂದಿನ ಜರೂರು ವಿಷಯ. ಇಂಥ ಸಮಸ್ಯೆಯ ಕಡೆಗೆ ಆಲೂರರ ಅಂದಿನ ಕರ್ನಾಟಕತ್ವದ ಪರಿಕಲ್ಪನೆ ಭಿನ್ನರೂಪ ಪಡೆದು ಕ್ರಿಯಾಶೀಲ ಆಗಬೇಕು. ಅಲ್ಲದೆ ಅದೇ ರೀತಿಯ ಹಲವು ಸಮಸ್ಯೆಗಳನ್ನು ನಮ್ಮ ಅಭಿಮಾನದ ಅರಿವು ಪರಿಹಾರಗಳನ್ನು ಕಂಡುಕೊಳ್ಳಬೇಕಿದೆ. ಈ ರೀತಿಯ ಕನ್ನಡ — ಕರ್ನಾಟಕತ್ವಗಳ ಕಡೆಗೆ ನಮ್ಮ ಗಮನ ಹರಿಯುವಂತೆ ಆಗಲಿ.

: : :

## ಅನುಬಂಧ: 1

ಅ.

ಆಲೂರ ವೆಂಕಟರಾಯರ ಜೀವನವನ್ನು ಕುರಿತ ಕೆಲವು ಪ್ರಶ್ನೆಗಳನ್ನು ಅವರ ಸಮಕಾಲೀನರು, ಅವರ ಬಗೆಗೆ ತಿಳಿದವರು ಹಾಗೂ ವಿದ್ವಾಂಸರಿಗೆ ಕಳುಹಿಸಿಕೊಡಲಾಯಿತು. 1985ರ ಮಾರ್ಚಿ ತಿಂಗಳಲ್ಲಿ ಕೇಳಲಾದ ಕೆಲವು ಪ್ರಶ್ನೆಗಳಿಗೆ ವಿದ್ವಾಂಸರು ನೀಡಿರುವ ಉತ್ತರಗಳು ಆಲೂರರ ಬಗೆಗೆ ಸಾಕಷ್ಟು ಮಾಹಿತಿಗಳನ್ನು ನೀಡಿವೆ. ಈ ಅನುಬಂಧದಲ್ಲಿ ಕರ್ನಾಟಕತ್ವ ಪರಿಕಲ್ಪನೆಯನ್ನು ಕುರಿತ ಒಂದು ಪ್ರಶ್ನೆಗೆ ಯಾವ ರೀತಿಯ ಪ್ರತಿಕ್ರಿಯೆಗಳು ಬಂದಿವೆ ಎಂಬುದನ್ನು ಪರಿಶೀಲಿಸಬಹುದು.

ಪ್ರಶ್ನೆ ಹೀಗಿದೆ:

ಆಲೂರರವರ ಕರ್ನಾಟಕತ್ವದ ಕಲ್ಪನೆ ಹಾಗೂ ಅದರ ಸಲುವಾಗಿ ಅವರು ಕೈಕೊಂಡ ಚಟುವಟಿಕೆಗಳು ಈಗಿನ ಕರ್ನಾಟಕ ರಾಜ್ಯದಲ್ಲಿ ಎಷ್ಟರ ಮಟ್ಟಿಗೆ ಪ್ರಯೋಜನಕಾರಿಯಾಗಿವೆ?

1) <u>ಶಂ.ಬಾ. ಜೋಶಿ:</u>

" ಆಲೂರ ವೆಂಕಟರಾಯರ ಕಾಲದ ಆದರ್ಶವಾದ ಇಂದು ಅದೃಶ್ಯವಾಗಿದೆ, ಅಂದು ಕರ್ನಾಟಕದ ಸಲುವಾಗಿ ಕೈಕೊಳ್ಳುತ್ತಿದ್ದ ಚಟುವಟಿಕೆಗಳು, ಕರ್ನಾಟಕ ಹಾಗು ಭಾರತದ ಏಳ್ಗೆಯನ್ನು ಕಾಣುವಂತಹವುಗಳಾಗಿದ್ದವು. ಆದರೆ ಇಂದು ಅದರಲ್ಲಿ ಸ್ವಾರ್ಥ ಅಧಿಕವಾಗಿದೆ. ಕರ್ನಾಟಕಕ್ಕಾಗಿ ಕಾರ್ಯ ಮಾಡುವುದರಿಂದ ನನಗೇನು ಲಾಭ ಎನ್ನುವ ಭೂಮಿಕೆ ಬಲಿಷ್ಠವಾಗಿದೆ. ಇದೇ ತೆರನಾದ ಸ್ವಾರ್ಥ ಮನೋಭಾವನೆ ಮುಂದುವರಿದರಲ್ಲಿ ಕರ್ನಾಟಕ ಭಾರತದ ಏಳ್ಗೆ ಸಾಧ್ಯವಿಲ್ಲ. ಆಲೂರರವರು ಕಂಡ ಕರ್ನಾಟಕತ್ವದ ಕಲ್ಪನೆಯಲ್ಲಿ ನಿಷ್ಠೆ ಇತ್ತು, ನಿಷ್ಠೆಗನುಗುಣವಾಗಿ ಸ್ವಾರ್ಥ ತ್ಯಾಗ ಮನೋಭಾವನೆ ಅವರಲ್ಲಿತ್ತು. ಹೊತ್ತು ಬಂದಂಗೆ ಕೊಡೆಯನ್ನು ಹಿಡಿಯುವ ಮನೋಭಾವನೆ ಜನರಲ್ಲಿ ಇರುವುದರಿಂದ ಮಾನವನ ಏಳ್ಗೆಗೆ ಇದು ಕಾರಣವಾಗಲಾರದು, ಸ್ವಾರ್ಥದ ಏಳ್ಗೆ ಮಾತ್ರ ಸಾಧ್ಯವಾದೀತು. "

2) <u>ಎಚ್.ಜಿ. ಜೋಶಿ:</u>

" ಕನ್ನಡಿಗರಲ್ಲಿ ಕರ್ನಾಟಕತ್ವದ ಕಲ್ಪನೆಯನ್ನು ಜಾಗೃತಗೊಳಿಸಿ ಕನ್ನಡಿಗರಲ್ಲಿ ಅಭಿಮಾನವನ್ನು ಕುದುರಿಸಿದ ಕೆಲವೇ ಜನರಲ್ಲಿ (ಆಗಿನ ಕಾಲದಲ್ಲಿ ಬೆರಳ ಮೇಲೆ ಎಣಿಸುವಷ್ಟು ಜನರಿದ್ದರು) ಆಲೂರರವರೂ ಒಬ್ಬರು. ಆದರೆ ಅವರ ಕರ್ನಾಟಕತ್ವ ಸಂಕುಚಿತವಾಗಿರಲಿಲ್ಲ. ಭಾರತಾಂತರ್ಗತ ಕರ್ನಾಟಕ ಮಾತೆಯೆಂದೇ ಅವರು ಭಾವಿಸಿದ್ದರು. ಅದು ಅವರ ಮಂತ್ರವಾಗಿದ್ದಿತೆಂದರೂ ಸಲ್ಲುವದು.

ಪ್ರಯೋಜನ ಪಡೆಯುವುದು ಬಿಡುವುದು ಇಂದಿನವರ ವಿಚಾರಕ್ಕೆ ಬಿಟ್ಟದ್ದು. ಅವರ ಕರ್ನಾಟಕತ್ವದ ಕಲ್ಪನೆಯನ್ನು ಸರಿಯಾಗಿ ಅರ್ಥೈಸಿಕೊಂಡದ್ದಾದರೆ ಅದು ಇಂದಿಗೂ ಪ್ರಯೋಜನಕಾರಿಯೇ."

3) <u>ಎಸ್.ಎನ್. ಮುನಗೋಳಿ:</u>

" ಕನ್ನಡ ಭಾಷೆಯನ್ನಾಡುವ ಜನರು ಒಂದಾಗಬೇಕು. ಈ ಭಾವೈಕ್ಯ ಈ ತರಿಮಾರಿನವರು ಇರುವವರೆಗೆ ಸಾಧ್ಯವಿಲ್ಲ."

4) <u>ರಂ.ಶ್ರೀ. ಮುಗಳಿ:</u>

" ಆಲೂರ ವೆಂಕಟರಾಯರ ಕರ್ನಾಟಕತ್ವದ ಕಲ್ಪನೆ ಅವರ ಪುಸ್ತಕದಲ್ಲಿ ಸ್ಪಷ್ಟ ವಾಗಿದೆ. ಅದುಇಂದಿನ ಕರ್ನಾಟಕ ರಾಜ್ಯದಲ್ಲಿ ಕೆಲಮಟ್ಟಿಗೆ ಪ್ರಯೋಜನಕಾರಿ ಯಾಗಿದೆ. ಆದರೆ ಕರ್ನಾಟಕದಲ್ಲಿ ಕನ್ನಡ ಭಾಷೆಗೆ ಆಡಳಿತ ಶಿಕ್ಷಣ ಮುಂತಾದ್ದ ರಲ್ಲಿ ಅಗ್ರಪಟ್ಟ ದೊರೆಯಬೇಕು ಎಂಬುದು ಇನ್ನೂ ಪೂರ್ಣವಾಗಿ ಕೈಗೂಡಿಲ್ಲ."

5) <u>ಸಾ.ಅ. ಹೊಸಕೇರಿ:</u>

" ವೆಂಕಟರಾಯರ ಕರ್ನಾಟಕತ್ವದ ಕಲ್ಪನೆ ಇಂದಿನ ರಾಜಕೀಯ ಸಮಯ ಸಾಧಕತೆಯ ಮೇಲಾಟದಲ್ಲಿ ಪ್ರಯೋಜನಕಾರಿಯಾದೀತು ಎಂದು ಹೇಳಲು ಬಾರದು. ಆದರೂ ನಾವು ಕರ್ನಾಟಕಸ್ಥರು, ನಾವು ಕನ್ನಡಿಗರು ಇಲ್ಲಿ ಕನ್ನಡಕ್ಕೆ ಪ್ರಾಧಾನ್ಯ ಎಂಬವೇ ಕೆಲವು ಮಾತುಗಳು ಮೂಲ ತತ್ವಗಳಾಗಿ ಪ್ರಭಾವ ಬೀರು ತ್ತಿರುವುದರಿಂದ ವೆಂಕಟರಾಯರ ಅಂದಿನ ಚಟುವಟಿಕೆಗಳು ಇಂದು ಪ್ರಯೋಜನ ಕಾರಿಯಾಗಿವೆ ಎಂದು ಹೇಳಲು ಅಭ್ಯಂತರವಿಲ್ಲ."

6) <u>ಭಾಲಚಂದ್ರ ವೆಂಕಟೇಶ ಫಾಣೀಕರ:</u>

" ದಿ. ಶ್ರೀ ಆಲೂರ ವೆಂಕಟರಾಯರ ಕರ್ನಾಟಕತ್ವದ ಕಲ್ಪನೆಯ ಕನಸು ಇಂದು ನನಸಾಗಿದ್ದು ಕನ್ನಡ ಜನಾಂಗಕ್ಕೆ ಸಂತಸದ ವಿಷಯವಾಗಿದೆ. ಆಲೂರರು ನಡೆ ಸಿದ ನಾಡು — ನುಡಿಗಳ ಬಗೆಗಿನ ಚಟುವಟಿಕೆಯಿಂದಾಗಿ ಈ ನಾಡಿನ ಜನತೆಗೆ ಕನ್ನಡ ತನದ ಅರಿವಾಗತೊಡಗಿತು. ಭಾಷಾಭಿಮಾನ ಬೆಳಗತೊಡಗಿತು. ಕರ್ನಾಟಕ ರಾಜ್ಯ ನಿರ್ಮಾಣವಾದಂದಿನಿಂದ ಎಲ್ಲಾ ಹಂತಗಳಲ್ಲೂ ಕನ್ನಡ ಭಾಷೆಗೆ ಹೆಚ್ಚಿನ ಪ್ರಾಶಸ್ತ್ಯ ವಿರಬೇಕೆಂಬ ವಿಚಾರವು ಜನತೆಯಲ್ಲಿಯೂ ಸರಕಾರದಲ್ಲಿಯೂ ಮೂಡಿತು. ಸರಕಾರದ ಬಳಕೆಯ ಭಾಷೆ ಕನ್ನಡವೇ ಇರಬೇಕೆಂಬ ಒಕ್ಕೊರಲಿನ ಕೂಗಿನಿಂದಾಗಿ, ಸರಕಾರ ಆ ದಿಶೆಯಲ್ಲಿ ಮುನ್ನಡೆಯುತ್ತಿದೆ."

7) <u>ಗೋವಿಂದರಾವ್ ಜುಳಕಿ:</u>

" ದಿ. ಆಲೂರ ವೆಂಕಟರಾಯರು ಕಲ್ಪಿಸಿದ ಕರ್ನಾಟಕತ್ವದ ರೂಪರೇಷೆಗಳು, ಅದಕ್ಕನುಗುಣವಾಗಿ ಕೈಕೊಂಡ ಚಟುವಟಿಕೆಗಳು ಕರ್ನಾಟಕತ್ವದ ಮಹತಿಯನ್ನು ಬೆಳೆಸುವುದಕ್ಕೆ, ಕರ್ನಾಟಕದ ಅಭಿಮಾನವನ್ನು ಕುದುರಿಸುವುದಕ್ಕೆ ಕನ್ನಡಿಗರನ್ನು ಕರ್ನಾಟಕ ಪ್ರಾಂತದ ಅಸ್ತಿತ್ವವನ್ನು ಸಕಲಾಂಗಗಳಲ್ಲಿ ಸರ್ವಾಂಗ ಸುಂದರವನ್ನಾಗಿಸುವ ಗುರಿಯನ್ನು ಜಾಗೃತಗೊಳಿಸಲು, ಚೇತೋಹಾರಿಗಳಾಗಲು ಬಡಿದೆಬ್ಬಿಸುವುದೆ ಮುಖ್ಯ ಚಟುವಟಿಕೆಯ ಅಂಶವಾಗಿತ್ತು. ಆ ಚಟುವಟಿಕೆಗಳು ಸುಗಮವಾದವು. ಅವುಗಳ ಫಲಿತಾರ್ಥ ಈಗೀಗ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಕಾಣುತ್ತಿವೆ. ಭಾಸಮಾನವಾಗಿ, ಅಂಶತಃ ಈಗ ಆ ಉದ್ದೇಶಗಳ ತಳಹದಿಯ ಮೇಲೆ ಸಾಗಿವೆ. ಈ ಪ್ರಗತಿಯು ಪ್ರಯೋಜನಕಾರಿಯಾಗುತ್ತಲಿದೆ. ಆದರೂ ಆಲೂರರವರ ಕರ್ನಾಟಕ ದೇವಿಯ ಕರ್ನಾಟಕತ್ವದ ಕಲ್ಪನೆ ಉಳಿದಿಲ್ಲ. "

8) <u>ಪಾಟೀಲ ಪುಟ್ಟಪ್ಪ:</u>

" ಆಲೂರ ವೆಂಕಟರಾಯರ ಕರ್ನಾಟಕದ ಕಲ್ಪನೆ ಜನರೊಳಗೆ ಸಂಪೂರ್ಣವಾಗಿ ತುಂಬಿಕೊಳ್ಳದೆ ಕರ್ನಾಟಕ ಪೂರ್ಣಗೊಳ್ಳಲಾರದು. ಆದ್ದರಿಂದ ಆಲೂರ ವೆಂಕಟರಾಯರ ಬೋಧೆ ಇಂದಿಗೂ ಪ್ರಯೋಜನಕಾರಿ ಎಂದು ನನ್ನ ಅಭಿಪ್ರಾಯ. "

9) <u>ಸ.ಸ. ಮಾಳವಾಡ:</u>

" ಆಲೂರ ವೆಂಕಟರಾಯರ ಕರ್ನಾಟಕತ್ವದ ಕಲ್ಪನೆ ಈಗಲೂ ಅವಶ್ಯಕವೆನಿಸಿದೆ.

ಅ) ನಮ್ಮ ರಾಷ್ಟ್ರೀಯ ರಂಗದಲ್ಲಿ ಕರ್ನಾಟಕವು ಇನ್ನೂ ಶಕ್ತಿರೂಪವನ್ನು ಪಾತ್ರವಹಿಸಲು ಸಾಧ್ಯವಾಗಿಲ್ಲ.

ಆ) ಕನ್ನಡದ ಪ್ರಜ್ಞೆ ಇನ್ನೂ ಪೂರ್ತಿಯಾಗಿ ರೂಢವಾಗಿಲ್ಲ, ಇಂಗ್ಲಿಷ ಮಾಧ್ಯಮದ ಶಾಲೆಗಳು, ಪತ್ರಿಕೆಗಳ ಪ್ರಭಾವವಿನ್ನೂ ಬಲವಾಗಿದೆ.

ಇ) ಕನ್ನಡ ಮನೆಮಾತು ಆಗಿಲ್ಲದವರು ಕನ್ನಡದ ಮುಖ್ಯ ಪ್ರವಾಹದೊಂದಿಗೆ ಹೊಂದಿಕೊಳ್ಳದೆ ಪ್ರತ್ಯೇಕತೆಯನ್ನು ಸಾಧಿಸುತ್ತಿದ್ದಾರೆ.

ಆಲೂರ ಆರಂಭಿಸಿದ ಚಟುವಟಿಕೆಗಳೇ ಈಗ ಮುಂದುವರಿದಿವೆ.

10) <u>ಕರಿಗುದರಿ:</u>

"... ನಮ್ಮಲ್ಲಿ ಕನ್ನಡ ಮತ್ತು ಕರ್ನಾಟಕ ಪ್ರಾಂತದ ಬಗ್ಗೆ ಜಾಗೃತಿ ಮತ್ತು ಅಭಿಮಾನಗಳು ಹುಟ್ಟಿ, ಇವು ಮುಂದುವರಿದುದರಿಂದ ಈಗ ನಮ್ಮದೇ ಆದ ಪ್ರತ್ಯೇಕ ಪ್ರಾಂತವನ್ನು ಹೊಂದಿ ಅದರ ಮೂಲಕ ಆನಂದ ಮತ್ತು ತೃಪ್ತಿಯನ್ನು ಪಡೆಯುತ್ತಿದ್ದೇವೆ... "

ನೆಂ.ಪ್ರಾ.ಬಿ. ಎಸ್. ಆರಾಧ್ಯಮಠ
ಧಾರವಾಡ.

೮.

ಆಲೂರ ವೆಂಕಟರಾಯರು ಮತ್ತು ಅವರ ಕರ್ನಾಟಕತ್ವದ ಪರಿಕಲ್ಪನೆಯನ್ನು ಕುರಿತಂತೆ ಕೆಲವು ವಿದ್ವಾಂಸರ ಪ್ರತಿಕ್ರಿಯೆಗಳು:

1) " ಕರ್ನಾಟಕದ ವಿಶೇಷತಃ ಉತ್ತರ ಕರ್ನಾಟಕದ ಯುವ — ಯುವತಿಯರಿಗೆ ಕನ್ನಡ, ಕನ್ನಡತ್ವ, ಕರ್ನಾಟಕ, ಕರ್ನಾಟಕತ್ವ ಇವುಗಳ ಬಗ್ಗೆ ಪ್ರಥಮ ಪರಿಚಯವನ್ನು, ಆ ಬಗ್ಗೆ ಸಾಧಾರ ಅಭಿಮಾನ, ಸ್ಫೂರ್ತಿಯನ್ನು ಸಲ್ಲಿಸಿದವರಲ್ಲಿ ಶ್ರೀ ಆಲೂರ ವೆಂಕಟರಾಯರ ಪಾತ್ರವು ಅದ್ವಿತೀಯವಾದುದು. "

— ರಂಗನಾಥ ರಾಮಚಂದ್ರ ದಿವಾಕರ.

2) " ಕರ್ನಾಟಕದ ಸಲುವಾಗಿ ವಿಚಾರ ಮಾಡುವವರೂ ತದನುಸಾರವಾಗಿಯೇ ಆಚರಿಸಲು ಪ್ರಯತ್ನಿಸುವವರೂ ಹಿರಿಯರಾದ ಕನ್ನಡಿಗರಲ್ಲಿ ಇನ್ನೂ ಇವರೊಬ್ಬರೇ! ಅದೇ ಇವರ ತಪಸ್ಸು. ಇವರ ಅದ್ವಿತೀಯವಾದ ಹೆಸರು ಅದರ ಫಲ. "

— ದತ್ತಾತ್ರೇಯ ರಾಮಚಂದ್ರ ಬೇಂದ್ರೆ.

3) " ಕರ್ನಾಟಕತ್ವದ ಈ ಮಂತ್ರವನ್ನು ಕನ್ನಡಿಗರ ಕಿವಿಯಲ್ಲಿ ಊದಿ ಕನ್ನಡಾಂಬೆಯನ್ನು ಕುರಿತು ಕನ್ನಡ ಜನ ತಪಾಚರಣೆಗೈವಂತೆ ಮಾಡಿ ಅವಳ ಸಾಕ್ಷಾತ್ಕಾರವಾದ ನಂತರ ಅವಳ ಪೂಜೆಗೈದು ಧನ್ಯತಾಭಾವದಿಂದ ದೇಹವಿಟ್ಟ ಈ ಕನ್ನಡದ ಕುಲಪುರೋಹಿತರೇ ದಿವಂಗತ ಆಲೂರ ವೆಂಕಟರಾಯರು. "

— ಸೂರ್ಯನಾಥ ಕಾಮತ್

4) " ದಿ. ಆಲೂರರವರು ಮಹಾನ್ ಸಾಹಿತಿಗಳು, ಒಳ್ಳೆಯ ಕನಸುಗಾರರು. ಸ್ವತಂತ್ರ ವಿಚಾರಗಳನ್ನು ಒಳಗೊಂಡ ಅವರು ಸಮಗ್ರ ಕರ್ನಾಟಕದ ವಿಕಾಸದ ಗುರಿ ಹೊಂದಿದ್ದರು. "

— ಪಿ.ಕೆ. ಭಾಗೋಜಿ.

5) " ಆಲೂರರವರು ಸಮಗ್ರ ಕರ್ನಾಟಕ ಕುರಿತು ಚಿಂತಿಸಿದರು. ಅದರ ಸಲುವಾಗಿ ದುಡಿದು ಸಣ್ಣಾದರು — ಹಣ್ಣಾದರು. "

— ಕೆ.ಎಸ್. ದೇಶಪಾಂಡೆ.

6) " ಕರ್ನಾಟಕ, ಕರ್ನಾಟಕತ್ವ ಎಂದು ಕನವರಿಸುತ್ತಿದ್ದವರಲ್ಲಿ ವೆಂಕಟರಾಯರು ಒಬ್ಬರು; ಅತ್ಯಂತ ಮುಖ್ಯರಾದ ಒಬ್ಬರು, ಅವರೊಬ್ಬರೇ ಎನ್ನುವಷ್ಟು ಒಬ್ಬರು. "

— ನಾರಾಯಣ ಕೃಷ್ಣ ಕುಲಕರ್ಣಿ (ಎನ್ಕೆ)

7) "ಗಾಢ ಅಜ್ಞಾನ ಕತ್ತಲೆಯಲ್ಲಿರುವ ಕನ್ನಡದ ಜನತೆಗೆ ವೆಂಕಟರಾಯರು ಕರ್ನಾಟಕದ ಕೈದೀಪವನ್ನು ಒದಗಿಸಿದರು."

— ಎಚ್. ವಿ. ಇಮಾರತಿ

8) "ತಾವೊಬ್ಬರೇ ಕರ್ನಾಟಕದ ಬಗೆಗೆ ಹುಚ್ಚರಾಗದೆಯೆ ಅನೇಕರನ್ನು ಇಂಥ ಹುಚ್ಚರನ್ನಾಗಿ ಪರಿವರ್ತಿಸಿದ ಶ್ರೇಯಸ್ಸು ಆಲೂರ ವೆಂಕಟರಾಯರದು."



— ವರದರಾಜ ಹುಯಿಲಗೋಳ.

9) "ತಾನು ಕನ್ನಡಿಗನೆಂಬುದನ್ನು ಮರೆತ ಜನಜಂಗುಳಿಯನ್ನು ಜಾಗೃತಗೊಳಿಸಿ ಅವರಲ್ಲಿ ಕನ್ನಡ ಅಭಿಮಾನ ಹುಟ್ಟಿಸಿದ್ದು. ಈ ದಿಸೆಯಲ್ಲಿ ಕನ್ನಡ — ಕರ್ನಾಟಕ — ಕರ್ನಾಟಕತ್ವ ಇವುಗಳ ಪ್ರಭೇದಗಳನ್ನು ಕನ್ನಡಿಗರ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಮಾಡಿಸಿದ್ದು. ಇವನಿಂದ ಬೆಳಗಿಸಿದ ಈ ಕನ್ನಡಮ್ಮನ ಜ್ವಾಲೆ, ಕರ್ನಾಟಕದ ಮೂಲೆಗಳಲ್ಲಿ ಪ್ರಜ್ವಲಿಸಿ, ಅನೇಕ ಸುಪ್ತ ಮನಸ್ಕರ ಬುದ್ಧಿಯನ್ನು ಕೆರಳಿಸಿ ದೇಶವನ್ನು ಜಾಜ್ವಲ್ಯಮಾನವಾಗಿ ಪ್ರಕಾಶಿಸಿತು. ಇವರಿಂದ ಪ್ರೇರಿತರಾದ ಅನೇಕ ಉತ್ಸಾಹಿ ತರುಣರು, ಈಗ ದಿಗಂತಗಳಾಗಿ ಕನ್ನಡಮ್ಮನ ಗುಡಿಯ ಆಧಾರಸ್ತಂಭ, ಕನ್ನಡ ಕವಿತೆಯ ಕುಲತಿಲಕ ಮತ್ತು ಕನ್ನಡ ಸಾಹಿತ್ಯದ ಹಿರಿಮೆಗಾರರಾಗಿದ್ದಾರೆ."

— ಕೆ. ಆರ್. ಆಲೂರ



10) "ವೆಂಕಟರಾಯರು ಕ್ರಾಂತಿವೀರರಾಗಲಿಲ್ಲ — ಇದೇ ಸೋಜಿಗ! ಆದರೆ ಕರ್ನಾಟಕದಲ್ಲಿ 'ವಿಚಾರ ಕ್ರಾಂತಿಯ' ನಾಂದಿ ಆಲೂರರವರಿಂದಲೇ ಆಗಿದೆ ಎಂದರೆ ಅತಿಶಯೋಕ್ತಿಯಲ್ಲ."

— ಶಂ. ಬಾ. ಜೋಶಿ.

11) "ಕರ್ನಾಟಕದ ಸರ್ವಾಂಗೀಣ ಜಾಗೃತಿಗೆ ಇವರು ಮೊಟ್ಟಮೊದಲು ಮಾಡಿದ ಉಪಕಾರವು ಅಮೋಘವಾಗಿದೆ. ಆದ್ದರಿಂದ ಅವರಿಗೆ 'ಕರ್ನಾಟಕದ ಕುಲಪುರೋಹಿತ' ಎಂಬ ಅನ್ವರ್ಥನಾಮ ಬಂದಿದೆ."

— ಆರ್. ಎಸ್. ಪಂಚಮುಖಿ

12) "ವೆಂಕಟರಾಯರು ಸ್ವತಃ ಕಾರ್ಯಕ್ಷೇತ್ರದಲ್ಲಿ ನಿಂತು ಜನರನ್ನೂ, ಸಂಸ್ಥೆಗಳನ್ನೂ ಕಟ್ಟುತ್ತಿದ್ದರಲ್ಲದೇ ಮುಂಧೋರಣೆಯುಳ್ಳ ತರುಣ ತರುಣಿಯರನ್ನು ಸಂಘಟಿಸುತ್ತಿದ್ದರು... ಅವರು ಕಂಡ 'ಕರ್ನಾಟಕ ಮಾತೆ' ಬಹಳ ಬುದ್ಧಿವಂತಳೂ, ಕರ್ತೃತ್ವಶಾಲಿಯೂ ಆಗಿದ್ದಳು."

— ಬುರ್ಲಿ ಬಿಂದುಮಾಧವ

13) “ ಕನ್ನಡಿಗರ ಸರ್ವತೋಮುಖ ಅಭಿವೃದ್ಧಿಗಾಗಿ ಅವರು ಪಟ್ಟ ಶ್ರಮವು ಅಪಾರವಾದುದು. ‘ ಕರ್ನಾಟಕತ್ವ ’ ದ ಆದರ್ಶವಾದದ ಹುಚ್ಚಿನಿಂದ ಮೈಮರೆತು ಅವರು ಕರ್ನಾಟಕಕ್ಕೆ ಸೇವೆ ಸಲ್ಲಿಸಿದರು. ಅವರು ಅಂದು ನೆಟ್ಟ ಕರ್ನಾಟಕತ್ವದ ಸಸಿ ಇಂದು ಹೆಮ್ಮರವಾಗಿ ನಮಗೆಲ್ಲ ಆಶ್ರಯ ಕೊಟ್ಟಿದೆ. ಇಂಥ ಶ್ರೇಷ್ಠ ಕನ್ನಡಿಗನನ್ನೇ ನಾವು ಮರೆಯುವುದಾದರೂ ಎಂತು? ”

— ವೀರೇಂದ್ರ ಹೆಗಡೆ.

14) “ ವೆಂಕಟರಾಯರ ‘ ಕರ್ನಾಟಕತ್ವದ ಕಲ್ಪನೆ ’ ಇನ್ನೂ ಪೂರ್ತಿಯಾಗಿ ರೂಪುಗೊಂಡಿಲ್ಲ. ‘ ಕನ್ನಡಪ್ರಜ್ಞೆ ’ ಇನ್ನೂ ಸಮರ್ಪಕವಾಗಿ ರೂಢವಾಗಿಲ್ಲ. ಹಾಗೆ ಆಗುವವರೆಗೆ ವೆಂಕಟರಾಯರ ಮೂರ್ತಿ ನಮ್ಮ ಬಗೆಗಣ್ಣ ಮುಂದಿರಬೇಕು. ಅವರ ಸ್ಫೂರ್ತಿ ಕನ್ನಡಿಗರನ್ನು ಮುನ್ನಡೆಸಬೇಕು. ”

— ಸ.ಸ. ಮಾಳವಾಡ.

15) “ ಕನ್ನಡ ನಾಡನ್ನು ಒಗ್ಗೂಡಿಸುವುದಕ್ಕಾಗಿ, ನಾಡು ನುಡಿಗಳ ಬಗೆಗೆ ಜನರಲ್ಲಿ ಅಭಿಮಾನವನ್ನು ಬಡಿದೆಬ್ಬಿಸುವುದಕ್ಕಾಗಿ, ಕರ್ನಾಟಕದ ಇತಿಹಾಸವನ್ನು ವೆಂಕಟರಾಯರು ಚೆನ್ನಾಗಿ ಬಳಸಿಕೊಂಡರು, ಈ ಮೂಲಕವಾಗಿ ತಮ್ಮ ಚಳುವಳಿಗೆ ಒಂದು ತಾತ್ವಿಕ ಹಿನ್ನೆಲೆಯನ್ನು ಒದಗಿಸಿದರು. ”

— ಶ್ರೀನಿವಾಸ ರಿತ್ತಿ.

: : :

## ಅನುಬಂಧ : 2

ಆಲೂರ ವೆಂಕಟರಾಯರು ತಮ್ಮ ಕರ್ನಾಟಕತ್ವದ ಕಾರ್ಯಕ್ಷೇತ್ರದಲ್ಲಿಯೇ ರಾಷ್ಟ್ರೀಯತ್ವದ ಹೋರಾಟ ಮತ್ತು ಕಾರ್ಯಚಟುವಟಿಕೆಗಳಿಗೆ ಪ್ರತಿಸ್ಪಂದಿಸಿದರು. ಅಂದು ರಾಷ್ಟ್ರೀಯ ಮಟ್ಟದಲ್ಲಿ ತೆಗೆದುಕೊಳ್ಳಲಾಗುತ್ತಿದ್ದ ನಿರ್ಣಯಗಳಿಗೆ ಪ್ರಾಂತೀಯವಾಗಿ ಜನರನ್ನು ಸಜ್ಜುಗೊಳಿಸುವುದು ಅವರ ನಿಲುವು ಆಗಿತ್ತು. ಮೊದಲು ಸ್ವಾತಂತ್ರ್ಯ ಹೋರಾಟವೆಂದಾಗಲಿ (ಭಾರತೀಯನೆಂದಾಗಲಿ) ಅಥವಾ ಅನಂತರ ಏಕೀಕರಣ ಹೋರಾಟವೆಂದಾಗಲಿ (ಕರ್ನಾಟಕಸ್ಥನೆಂದಾಗಲಿ) ಅವರು ಹಿಂದು, ಮುಂದು ಮಾಡಿ ನೋಡುತ್ತಿರಲಿಲ್ಲ. ವ್ಯಷ್ಟಿತ್ವವೂ, ಸಮಷ್ಟಿತ್ವವೂ ಒಂದೇ ರೀತಿಯದು ಆಗಿರಬೇಕು ಎಂಬುದು ಅವರ ನಿಲುವು.

ಅವರ ಪ್ರಾದೇಶಿಕ ರಾಷ್ಟ್ರೀಯತ್ವದ ಚಳುವಳಿಗಳಲ್ಲಿ 1) ರಾಜಕಾರಣ, 2) ಸ್ವದೇಶಿ, 3) ಬಹಿಷ್ಕಾರ, 4) ರಾಷ್ಟ್ರೀಯ ಶಿಕ್ಷಣ, 5) ಸ್ವರಾಜ್ಯ ಅಥವಾ ಹೋಂ ರೂಲ್ ಲೀಗ್, 6) ಅಸಹಕಾರ, 7) ಅಖಂಡ ಕರ್ನಾಟಕ ನಿರ್ಮಾಣ ಹಾಗೂ ಇನ್ನಿತರೆ ಚಳುವಳಿಗಳು ಎಂದು ವಿಭಾಗಿಸಬಹುದು. ಈ ಎಲ್ಲ ಚಳುವಳಿಗಳಲ್ಲೂ ಅವರು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ.

ಹಾಗೆಯೇ ಸಾಂಸ್ಕೃತಿಕ ರಾಷ್ಟ್ರೀಯತ್ವದಲ್ಲಿ ಅಂದರೆ ಕೇವಲ ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಕಾರ್ಯಮಗ್ನರಾಗುತ್ತಾರೆ. ಇದರಲ್ಲಿ 1) ವಾಙ್ಮಯ, 2) ಇತಿಹಾಸ, 3) ಅಖಿಲ ಕರ್ನಾಟಕ ವಿಶ್ವವಿದ್ಯಾಲಯ, 4) ಅಖಂಡ ಕರ್ನಾಟಕ ನಿರ್ಮಾಣ ಹಾಗು ಇತರೆ ಸಾಂಸ್ಕೃತಿಕ ಚಟುವಟಿಕೆಗಳು ಸೇರಿವೆ. ಇವುಗಳಲ್ಲಿ ಆಲೂರರೇ ಸ್ವತಃ ಭಾಗವಹಿಸಿದ್ದಾರೆ. ಅಲ್ಲದೆ ಇತರರು ಮುಂದಾಳತ್ವ ವಹಿಸಿಕೊಂಡು ಕಾರ್ಯ ನಿರ್ವಹಿಸಲು ಪ್ರೇರೇಪಣೆ ನೀಡುತ್ತಿದ್ದವರು. ಅವರ ಈ ಎಲ್ಲಾ ಕಾರ್ಯ ಚಟುವಟಿಕೆಗಳೂ ಕರ್ನಾಟಕತ್ವಕ್ಕೆ ಸೀಮಿತ. ಮೊದಲು ತಮ್ಮನ್ನು ತಾವು ಅರಿಯುವುದು ಮುಖ್ಯವೆನ್ನುತ್ತಿದ್ದ ಆಲೂರರು, ಆ ಮೂಲಕ ನಾಡು, ನುಡಿ, ಇತಿಹಾಸ, ಸಂಸ್ಕೃತಿಗಳಿಂದ ಗುರುತಿಸಿಕೊಳ್ಳುವ ಕರ್ನಾಟಕತ್ವದ ಕಾರ್ಯಕ್ರಮಗಳನ್ನು ಹಾಕಿಕೊಂಡವರು.

(2)

ಆಲೂರ ವೆಂಕಟರಾಯರ ಕನ್ನಡ-ಕರ್ನಾಟಕದ ಬಗೆಗಿನ ಅಭಿಮಾನ ಮೂಡಿಸುವ ಎಲ್ಲಾ ಕಾರ್ಯಚಟುವಟಿಕೆಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಪಟ್ಟಿ ಮಾಡಬಹುದು.

1) <u>ರಾಜಕೀಯ ರಂಗ:</u>

1) ಸ್ವದೇಶಿ ಚಳುವಳಿ
2) ರಾಷ್ಟ್ರೀಯ ಶಿಕ್ಷಣ
3) ಹೋಂ ರೂಲ್ ಲೀಗ
4) ಅಖಿಲ ಭಾರತ ಕಾಂಗ್ರೆಸ
5) ಕರ್ನಾಟಕ ರಾಷ್ಟ್ರೀಯ ಪರಿಷತ್ತು
6) ಕರ್ನಾಟಕ ಏಕೀಕರಣ ಸಂಘ
7) ಕನ್ನಡಿಗರ ಸಂಘ

2) <u>ಚರಿತ್ರೆಯ ಕಾರ್ಯಕ್ಷೇತ್ರ:</u>

1) ಕರ್ನಾಟಕ ಇತಿಹಾಸ ಸಂಶೋಧನ ಮಂಡಲದ ಸ್ಥಾಪನೆ
2) ಇತಿಹಾಸ ವಿಷಯ ಸಮ್ಮೇಳನಗಳು
3) ವಿದ್ಯಾರಣ್ಯ ಉತ್ಸವ
4) ಬಸವೇಶ್ವರ ಉತ್ಸವ
5) ನಿಜಗುಣ ಶಿವಯೋಗಿಗಳ ಉತ್ಸವ
6) ಕುಮಾರವ್ಯಾಸ ಉತ್ಸವ
7) ಪಂಪಕವಿ ಉತ್ಸವ
8) ವಿಜಯನಗರ ಷಟ್ ಶತಮಾನೋತ್ಸವ

3) <u>ಸಾಹಿತ್ಯ ಕ್ಷೇತ್ರ:</u>

1) ಕರ್ನಾಟಕ ವಿದ್ಯಾವರ್ಧಕ ಸಂಘ
2) ಗ್ರಂಥಕರ್ತರ ಸಮ್ಮೇಳನ
3) ಕರ್ನಾಟಕ ಗ್ರಂಥಕರ್ತರ ಮಂಡಲ
4) ಕನ್ನಡ ಸಾಹಿತ್ಯ ಪರಿಷತ್ತು
5) ನವಜೀವನ ಗ್ರಂಥ ಭಂಡಾರ
6) 'ಜಯಕರ್ನಾಟಕ' ಪತ್ರಿಕೆ ಆರಂಭ
7) ಗೀತಾಕುಸುಮ ಮಂಜರಿ
8) ಶಾಂತೇಶ ವಾಚನಾಲಯ ಸ್ಥಾಪನೆ

(3)

4) ಶಿಕ್ಷಾ — ಸಂಸ್ಕೃತಿ ಕ್ಷೇತ್ರ:

1) ಗ್ರಂಥಾಲಯ ಚಳುವಳಿ
2) ಭಾರತ ಪುಸ್ತಕಾಲಯ
3) ವಾಚನಾಲಯ ಸಮ್ಮೇಳನಗಳು
4) ನಾಟಕ ಸಮ್ಮೇಳನಗಳು
5) ಸಂಗೀತ ಕಚೇರಿಗಳು
6) ಔದ್ಯೋಗಿಕ ಸಮ್ಮೇಳನಗಳು ಮತ್ತು ಪ್ರದರ್ಶನಗಳು
7) ಕಲಾ ಪ್ರದರ್ಶನಗಳು
8) ಕರ್ನಾಟಕ ವಿಶ್ವವಿದ್ಯಾಲಯ ಸಂಘ

ಈ ಎಲ್ಲ ಸಂಘ — ಸಂಸ್ಥೆಗಳ ಹಾಗು ಚಳುವಳಿಗಳ ಮುಖ್ಯ ಉದ್ದೇಶ ಕನ್ನಡಿಗರನ್ನು ಎಚ್ಚರಿಸುವುದೇ ಆಗಿತ್ತು. ಕರ್ನಾಟಕತ್ವದ ಅಭಿಮಾನದ ಮೂಲಕ ಕನ್ನಡಿಗರನ್ನು ಒಂದೇ ಆಡಳಿತಕ್ಕೆ ಒಳಪಡಿಸುವುದು ಅಷ್ಟು ಸುಲಭದ ಮಾತಾಗಿರಲಿಲ್ಲ. ಆ ಕಾರ್ಯವನ್ನು ಪೂರ್ಣಗೊಳಿಸಲು ಆಲೂರರು ಮೇಲಿನ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸುವುದರ ಜೊತೆಗೆ ಜನತೆಯನ್ನೂ ಪಾಲ್ಗೊಳ್ಳುವಂತೆ ಮಾಡಿದ್ದಾರೆ.

: : :

# ಅನುಬಂಧ : 3

## ಅ) ಆಲೂರ ವೆಂಕಟರಾಯರ ಕೃತಿಗಳು ಮತ್ತು ಲೇಖನಗಳು:


1. ಕರ್ನಾಟಕ ಗತ ವೈಭವ, (1978, 10ನೇಯ ಆವೃತ್ತಿ), ಧಾರವಾಡ; ಸಮಾಜ ಪುಸ್ತಕಾಲಯ.
2. ಕರ್ನಾಟಕ ವೀರರತ್ನಗಳು, (1930), ಧಾರವಾಡ, ವರದರಾಜ ಹುಯಿಲಗೋಳ (ಪ್ರ).
3. ಕರ್ನಾಟಕತ್ವದ ವಿಕಾಸ, (1957), ಧಾರವಾಡ; ನವಜೀವನ ಗ್ರಂಥ ಭಂಡಾರ.
4. ಕರ್ನಾಟಕತ್ವದ ಸೂತ್ರಗಳು, (1950), ಧಾರವಾಡ; ನವಜೀವನ ಗ್ರಂಥ ಭಂಡಾರ.
5) ನನ್ನ ಜೀವನ ಸ್ಮೃತಿಗಳು, (1974), ಧಾರವಾಡ; ಮನೋಹರ ಗ್ರಂಥಮಾಲಾ.
6. 'ಬಿಡಿನುಡಿ ಸಂಚಯ' (1981), ಧಾರವಾಡ; ವರದರಾಜ ಹುಯಿಲಗೋಳ (ಸಂ ಮತ್ತು ಪ್ರ)
7. 'ಕರ್ನಾಟಕಾಂತರ್ಗತ ಭಾರತ ಮಾತೆಗೆ ನಮಸ್ಕಾರ', (1937), ಕರ್ನಾಟಕ ದರ್ಶನ (ಸಂ: ಬುರ್ಲಿ ಬಿಂದು ಮಾಧವ) ಧಾರವಾಡ; ಮಿಂಚಿನಬಳ್ಳಿ.
8) 'ಧೃತರಾಷ್ಟ್ರರೆಲ್ಲರೂ ಕುರುಡರೇ', (1712-1922), ಹುಬ್ಬಳ್ಳಿ; ಕರ್ಮವೀರ.
9. 'ಭೂರಕ್ಷಸಾಯ ಸ್ವಾಹಾ:' (14.10.1921) ಹುಬ್ಬಳ್ಳಿ, 'ಕರ್ಮವೀರ',
10. ಉಳಿದಂತೆ 'ಜಯಕರ್ನಾಟಕ' ಪತ್ರಿಕೆಗಳಲ್ಲಿನ ಆಲೂರರ ಸಂಪಾದಕೀಯ ಹಾಗೂ ಲೇಖನಗಳನ್ನು (1922-28) ಆಧಾರವನ್ನಾಗಿಸಿಕೊಳ್ಳಲಾಗಿದೆ.


## ಆ) ಆಲೂರರನ್ನು ಕುರಿತ ಕೃತಿಗಳು, ಲೇಖನಗಳು:


1. ನಾಗರಾಜ, ಎಂ., (1986) ಕರ್ನಾಟಕ ಕುಲಪುರೋಹಿತ, ಬೆಂಗಳೂರು; ಕನ್ನಡ ಜಾಗೃತಿ ಪರಿಷತ್.
2. ಸಾಯಕ್, ಎಸ್.ಬಿ. (ಪ್ರ), (1984), ಆಲೂರ ವೆಂಕಟರಾಯರು : ಜೀವನ ಹಾಗೂ ಕೃತಿಗಳು, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ.

(2)

3. ನಾಯಕ, ಹಾ.ಮಾ. (ಸಂ), (1983), ಆಲೂರು ವೆಂಕಟರಾಯರು, ಮೈಸೂರು; ಮೈಸೂರು ವಿಶ್ವವಿದ್ಯಾಲಯ.

4. ಮಾಳವಾಡ, ಸ.ಸ., (1981), ಕರ್ನಾಟಕ ಕುಲಪುರೋಹಿತರು, ಧಾರವಾಡ; ಕು.ಕು. ಜನ್ಮ ಶತಮಾನೋತ್ಸವ ಸಮಿತಿ.

5. ರಾಘವೇಂದ್ರರಾವ್, ಕೆ., (1980), ಹಾರ್ಟ್ ಈಸ್ ಕರ್ನಾಟಕ : ಲೈಫ್ ಅಂಡ್ ವರ್ಕ್ ಆಫ್ ವೆಂಕಟರಾವ್, ಧಾರವಾಡ; ಸೆಂಟಿನರಿ ಸೆಲಿಬ್ರೇಷನ್ ಕಮಿಟಿ.

6. ಸಾಂಗಲಿ, ವೆಂಕಟೇಶ (ಸಂ), (1970), ಆಲೂರ ವೆಂಕಟರಾಯರು, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

7. ಸಾಂಗಲಿ, ವೆಂಕಟೇಶ, (ಸಂ) (1972), ಹೊಸಗನ್ನಡದ ಪುಣ್ಯಪುರುಷರು, ಭಾಗ 1, ಮುಂಬಯಿ; ದ್ವೈಪಾಯನ ಟ್ರಸ್ಟ್.

8. ಸೊರಬ, ವೇಣುಗೋಪಾಲ, (1990), ಆಲೂರ ವೆಂಕಟರಾಯರು (ಲೇಖನ) ಸಾಲುದೀಪಗಳು (ಸಂ: ಸಿದ್ಧಲಿಂಗಯ್ಯ ಜಿ.ಎಸ್. ಮತ್ತು ಕೃಷ್ಣಯ್ಯ, ಎಂ.ಎಚ್.) ಬೆಂಗಳೂರು, ಕರ್ನಾಟಕ ಸಾಹಿತ್ಯ ಅಕಾಡೆಮಿ.

9. ಹಕಾರಿ, ದೇವೇಂದ್ರ ಕುಮಾರ, (1980), ಕರ್ನಾಟಕ ಕುಲಪುರೋಹಿತ ಆಲೂರ ವೆಂಕಟರಾವ್, ಧಾರವಾಡ; ಜನ್ಮಶತಮಾನೋತ್ಸವ ಸಮಿತಿ.

10. ಹುಯಿಲಗೋಳ, ವರದರಾಜ, (1973), ಆಲೂರ ವೆಂಕಟರಾವ್, ಬೆಂಗಳೂರು; ಭಾರತ — ಭಾರತಿ ಪುಸ್ತಕ ಸಂಪದ.

11. ಹುಯಿಲಗೋಳ, ವರದರಾಜ (4-11-1956), ‘ಆಲೂರ ವೆಂಕಟರಾಯರು 60 ವರ್ಷಗಳ ಹಿಂದೆ ಕಂಡ ಕನಸು ನನಸಾಯಿತು (ಲೇಖನ) ಹುಬ್ಬಳ್ಳಿ; ಪ್ರಪಂಚ.

12. ಹುಯಿಲಗೋಳ, ವರದರಾಜ (4-11-1973), ‘ಕನ್ನಡ ಕುಲಪುರೋಹಿತ ಕನಸು ನನಸು’ (ಲೇಖನ) ಬೆಂಗಳೂರು; ಸುಧಾ.

13. ಹುಯಿಲಗೋಳ, ವರದರಾಜ (15.5.1985), ‘ಕನ್ನಡಕ್ಕೆ ಆಲೂರ ವೆಂಕಟರಾಯರ ಕೊಡುಗೆ’ (ಲೇಖನ) ಗೋವಾ; ಕದಂಬವಾಣಿ (ಸಂ.1, ಸಂ.1)

14. ಹುಯಿಲಗೋಳ, ವರದರಾಜ, (ಜುಲೈ 1980), ‘ಕರ್ನಾಟಕ ಕುಲಪುರೋಹಿತರೆನಿಸಿದ್ದ ಆಲೂರ ವೆಂಕಟರಾಯರು’, (ಲೇಖನ), ಧಾರವಾಡ; ಕಸ್ತೂರಿ.

15. ಹುಯಿಲಗೋಳ, ವರದರಾಜ, (ಅಕ್ಟೋಬರ್ 1992), ‘ಪ್ರಾತಃಸ್ಮರಣೀಯ ಆಲೂರ ವೆಂಕಟರಾಯರು’ (ಲೇಖನ), ಮುಂಬಯಿ; ತಾಯಿನಾಡು.

## ೨. ಪೂರಕ ಸಾಹಿತ್ಯ

1) ಕಾಮತ್, ಸೂರ್ಯನಾಥ, (1981), ಕರ್ನಾಟಕದಲ್ಲಿ ಜಾಗೃತಿ, ಬೆಂಗಳೂರು ವಿಶ್ವವಿದ್ಯಾಲಯ.

2) ಕಾಮತ್, ಸೂರ್ಯನಾಥ, (ಸಂ), (1974) ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು (ಸಂ.2), ಮೈಸೂರು; ಗೀತಾ ಬುಕ್ ಹೌಸ್.

3) ಕಿತ್ತೂರ, ಕೃಷ್ಣಮೂರ್ತಿ, (1978), ಗಳಗನಾಥರು ಮತ್ತು ಅವರ ಕಾದಂಬರಿಗಳು, ಧಾರವಾಡ; ಕರ್ನಾಟಕ ವಿಶ್ವವಿದ್ಯಾಲಯ

4) ದಿವಾಕರ, ರಂಗನಾಥ ರಾಮಚಂದ್ರ, (1992), ಕರ್ನಾಟಕ ಏಕೀಕರಣ ಕಥೆ, ಹುಬ್ಬಳ್ಳಿ; ಲೋಕಶಿಕ್ಷಣ ಟ್ರಸ್ಟ್.

5) ಬೇಂದ್ರೆ, ದತ್ತಾತ್ರೇಯ ರಾಮಚಂದ್ರ (1974), ಸಾಹಿತ್ಯದ ವಿರಾಟ ಸ್ವರೂಪ, ಧಾರವಾಡ; ಸಮಾಜ ಪುಸ್ತಕಾಲಯ.

6) ಬೇಂದ್ರೆ, ದತ್ತಾತ್ರೇಯ ರಾಮಚಂದ್ರ, (1968), ವಿಚಾರಮಂಜರಿ, ಧಾರವಾಡ; ಮಿಂಚಿನ ಬಳ್ಳಿ.

7) ಮುಗಳಿ, ರಂಗನಾಥ ಶ್ರೀನಿವಾಸ, (1970), ವಿಮರ್ಶೆಯ ವ್ರತ, ಮೈಸೂರು; ಉಷಾ ಪುಸ್ತಕ ಮಾಲೆ.

8) ರಾಘವೇಂದ್ರರಾವ್, ಎಚ್.ಎಸ್; (ಸಂ) (1993), ಸಿರಿಗನ್ನಡ (ಸಂ.1, ಸಂ.1) ಹಂಪಿ, ಕನ್ನಡ ವಿಶ್ವವಿದ್ಯಾಲಯ.

9) ನಾಗರಾಜ, ಡಿ.ಆರ್., (1988), 'ರಾಷ್ಟ್ರೀಯತೆಯ ಪರಿಕಲ್ಪನೆ: ಕೆಲವು ಟಿಪ್ಪಣಿಗಳು; ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ, (ಸಂ: ಶಿವರುದ್ರಪ್ಪ, ಜಿ.ಎಸ್.) ಬೆಂಗಳೂರು; ಕರ್ನಾಟಕ ಸಾಹಿತ್ಯ ಅಕಾಡೆಮಿ.

10) ನಂದಗಾಂವ್, ಎಫ್.ಎಂ., (1.11.1987), 'ಮೂರು ದಶಕವಾದರೂ ಕೊನೆಗಾಣದ ಸಂಕುಚಿತ ಭಾವನೆ', ಬೆಂಗಳೂರು; ಪ್ರಜಾವಾಣಿ (ಸಾಪ್ತಾಹಿಕ ಪುರವಣಿ)

11. ಶಿವಮೂರ್ತಿ ಶಾಸ್ತ್ರಿ, ಬಿ. (1970), ಕರ್ನಾಟಕ ಏಕೀಕರಣ ಚರಿತ್ರೆ, ಚಿನ್ನದ ಬೆಳಸು (ಸಂ: ಸೀತಾರಾಮಯ್ಯ, ವಿ ) ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

12. ಪೊಲೀಸ್ ರಿಪೋರ್ಟ್: (1931) 'ಹಿಸ್ಟರಿ ಶೀಟ್ ಆಫ್ ವೆಂಕಟೇಶ ಭೀಮರಾವ್ ಆಲೂರ್, ಬಿ.ಎ., ಎಲ್.ಎಲ್.ಬಿ., ಎಕ್ಸ್ ಎಡಿಟರ್ : ಜಯಕರ್ನಾಟಕ, ಧಾರವಾಡ ಸೂಪರಿಂಟೆಂಡೆಂಟ್ ಆಫ್ ಪೊಲೀಸ್, ಧಾರವಾಡ.

(4)

ಈ) ಇತರೆ:

ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ಇಲ್ಲಿ ಆಲೂರರ ಹಸ್ತಪ್ರತಿಗಳು, ಕಾಗದ ಪತ್ರಗಳು, ಪತ್ರಿಕೆಗಳು ಮೊದಲಾದವುಗಳನ್ನು ಗಮನಿಸಲಾಗಿದೆ. ಅಲ್ಲದೆ ಆಲೂರರನ್ನು ಕುರಿತಂತೆ ಈ ಕೆಳಕಂಡ ಪತ್ರಿಕೆ – ನಿಯತಕಾಲಿಕಗಳಲ್ಲಿನ ಮಾಹಿತಿಗಳನ್ನು ಆಧಾರವನ್ನಾಗಿರಿಸಿಕೊಳ್ಳಲಾಗಿದೆ.

1. ಸಂಯುಕ್ತ ಕರ್ನಾಟಕ (ಮಾರ್ಚ್‌ನಿಂದ ಜುಲೈವರೆಗೆ 1980)
2. ಕನ್ನಡಪ್ರಭ, (13.7.1980)
3. ಡೆಕ್ಕನ್ ಹೆರಾಲ್ಡ್, (19.7.1980)
4. ಸುದ್ದಿಸಂಗಾತಿ, (1.11.1973)
5. ವಿಶಾಲಕರ್ನಾಟಕ (6.11.1958)
6. ನವೋದಯ (30.9.1980)
7. ನಾಗರಿಕ (23,29.9.1980)
8. ಜನಪ್ರಕಾಶ (11.9.1980)
9) ಪ್ರಜಾಮತ (1.11.1981)
10. 'ಮಾರ್ಚ್ ಆಫ್ ಕರ್ನಾಟಕ' ಸಂಚಿಕೆಗಳು
11. ಜನಪ್ರಗತಿ, (26.1.1958)
12. ವಾಗ್ಭೂಷಣ' ಸಂಚಿಕೆಗಳು
13. 'ಕನ್ನಡ ನುಡಿ' ಸಂಚಿಕೆಗಳು
14. 'ಲೋಕಶಿಕ್ಷಣ ಪತ್ರಿಕೆ' (29.3.92, 'ಕನ್ನಡ ರಾಷ್ಟ್ರೀಯತೆಯ ಸ್ವರೂಪ' ಪ್ರಬಂಧದ ಸಂಕ್ಷಿಪ್ತ ಪಾಠ)
15. 'ಸಾಧನೆ' ಸಂಚಿಕೆಗಳು

— ಇತ್ಯಾದಿ

: : :

## ಜಯಕರ್ನಾಟಕ ತಿಲಕ

ವಿಸ್ಮೃತಿಯ ಧೂಳಿಡಿದು ಮೂಲೆಗುಂಪಾಗಿದ್ದ
ರನ್ನಗನ್ನಡಿಯನೊರೆಸಿ, ಕನ್ನಡಿಗರ ಮುಖಕೆ
ಹಿಡಿದು ಉಜ್ಜುಗಿಸಿ ಭಾವೀ ವಿಭವ ದರ್ಶನಕೆ

ಗತವೈಭವದ ಚೈತನ್ಯ ಜ್ಯೋತಿ ಹಿಡಿದಿದ್ದ
ಎದ್ದ ನಸುಕಿನಲ್ಲಿ ಜಯಕರ್ನಾಟಕ ಮಂತ್ರ
ಜಪಿಸಿ, ಕರ್ನಾಟಕತ್ವದ ವಿಕಾಸ — ನಕಾಸ
ಬರೆದು, ಎದೆಯಲ್ಲಿ ತುಂಬಿದಾವೇಶ.

ಕಟ್ಟಿ ಸಂಸ್ಥೆಗಳ, ಬೆನ್ನು ತಟ್ಟಿ ತಾ ಸ್ವತಂತ್ರ —
ಭಾರತದಲ್ಲಿ ಅಖಂಡ ಕರ್ನಾಟಕವ ಕಡೆದು,
ಆಧ್ಯಾತ್ಮ ಚಿಂತನೆಯ ಖಾದಿಯ ಶಾಲು ಹೊದೆದು,
ಮುಡುಪಿಟ್ಟ ಜೀವನ ಸ್ಮೃತಿಯ ಸಂಪುಟವ ತೆರೆದು

ರೇಶಿಮೆ ಗಡ್ಡ ನೀವಿ, ತೆರಳಿದಿರಿ ಹರಿಯ ನೆನೆದು.
' ನನ್ನ ಪೂರಾ ಮರೆತು ಕರ್ನಾಟಕವ ಸ್ಮರಿಸಿ '
ಎಂದಿರಾ? ಇಂದಿನೀ ಕುಬ್ಜರನೆತ್ತಿ ಹರಸಿ.

— ಚನ್ನವೀರ ಕಣವಿ.

: : :

